# ಗೋರ್ಕಿಯ ಕಥೆಗಳು

ಅನುವಾದಕ

ಕೆ ವಿ ಸುಬ್ಬಣ್ಣ

ಅಕ್ಷರ ಪ್ರಕಾಶನ ಸಾಗರ ಕರ್ನಾಟಕ ರಾಜ್ಯ

GORKIYA KATHEGAḶU : (Kannada) Translations of seven stories of Maxim Gorky, by K. V. Subbanna ; Printed at Sagara Mudrana, Sagar and Published by Akshara Prakashana, Sagar (Karnataka) 577401 ; Third Impression: Jan. 1974 ; 1000 Copies, 73 pages, Price Rs. ರೂ. 8–00

ಬೆಲೆ : ರೂ. 8–00 ಾಯಿಂಗಳು

# ಅರಿಕೆ ೧

ರಷ್ಯಾ ದೇಶದ ಪ್ರಸಿದ್ಧ ಲೇಖಕ ಮ್ಯಾಕ್ಸಿಂ ಗೋರ್ಕಿಯ ಕೆಲವು ಕಥೆಗಳ ಅನುವಾದ ಇಲ್ಲಿದೆ. ಇವುಗಳಲ್ಲಿ ಮೊದಲ ಮೂರು 'ಓಲ್ಡ್ ಇಸರ್ಜಿಲ್' ಎಂಬ ಕಥಾ ಮಾಲಿಕೆಯವು, ಮತ್ತೆ ನಾಲ್ಕು 'ಟೇಲ್ಸ್ ಆಫ್ ಇಟಲಿ'ಯಿಂದ ಆಯ್ದುಕೊಂಡವು. ಮೊದಲು ಬೇರೆ ಬೇರೆ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದ ಇವನ್ನು ಬೆಂಗಳೂರಿನ 'ಜನಶಕ್ತಿ ಪ್ರಕಾಶನ'ದವರು ೧೯೫೫ ರಲ್ಲಿ ಪುಸ್ತಕರೂಪದಲ್ಲಿ ಹೊರತಂದರು. ಆಗ ಪುಸ್ತಕದಲ್ಲಿ ಸೇರದೆ ಬಿಟ್ಟುಹೋಗಿದ್ದ ಇನ್ನೊಂದು ಕಥೆಯನ್ನೂ ಸೇರಿಸಿ ಎರಡನೇ ಮುದ್ರಣವನ್ನು ಪ್ರಕಟಿಸಿದೆ. ಇದು ಮೂರನೆಯ ಯಥಾಮುದ್ರಣ.

೧೯೭೧ ರಲ್ಲಿ ಈ ಪುಸ್ತಕಕ್ಕೆ 'ಸೋವಿಯೆತ್ ಲ್ಯಾಂಡ್'ನ ನೆಹರೂ ಪ್ರಶಸ್ತಿ ದೊರಕಿತು. ಆ ಬಗ್ಗೆ ನನ್ನ ಕೃತಜ್ಞತೆ ಸಲ್ಲಬೇಕು.

೧-೧-೧೯೭೪ **ಕೆ ವಿ ಸುಬ್ಬಣ್ಣ**

## ಪರಿವಿಡಿ

"ನಾನು ಏಕೆ ಬರೆಯುವುದಕ್ಕೆ ಪ್ರಾರಂಭಿಸಿದೆ ಎಂಬ ಪ್ರಶ್ನೆ ಬಂದಾಗೆಲ್ಲ ನನ್ನ ಉತ್ತರ ಇದು : ಒಂದು, ಬದುಕಲ್ಲಿ ತುಂಬಿರುವ ಬೇಸರದ ಒತ್ತಡಕ್ಕಾಗಿ ನಾನು ಬರೆಯತೊಡಗಿದೆ ; ಇನ್ನೊಂದು, ಬದುಕಿನ ಚಿತ್ರಗಳು ನನ್ನ ಮನಸ್ಸಿನಲ್ಲಿ ಅಷ್ಟು ಅಚ್ಚೊತ್ತಿ ಹೋಗಿದ್ದು ನಾನು ಬರೆಯದೆ ಉಳಿಯುವುದೇ ಅಸಾಧ್ಯವಾಗಿತ್ತು. ಈ ಬೇಸರದ ಬದುಕಿನಲ್ಲಿ ಕಲ್ಪನಾ–ಕಥೆಗಳ ಜರತಾರಿ ಹೊಳಪನ್ನು ತರುವುದಕ್ಕೆಂದು 'ಗಿಡುಗನ ಹಾಡು', 'ಜ್ವಲಂತ ಹೃದಯ', 'ಕಡಲು ಹಕ್ಕಿಯ ಗಾಳಿ ಹಾಡು' ಮುಂತಾದ ಕಥೆಗಳನ್ನು ಬರೆದೆ. ಮನಸ್ಸಿನಲ್ಲಿ ಅಚ್ಚೊತ್ತಿಬಿಟ್ಟಿದ್ದ ಚಿತ್ರಕಂಪನಗಳನ್ನು ಹೊರ ಹಾಕುವ ಆಗತ್ಯವೇ 'ಇಪ್ಪತ್ತಾರು ಗಂಡಸರು ಮತ್ತು ಒಬ್ಬ ಹುಡುಗಿ', 'ಆರ್‌ಲೋವ್ಸ್', 'ಕಿಲಾಡಿಗಾರ' ಮುಂತಾದವನ್ನು ಬರೆಯಲು ಪ್ರೇರೇಪಿಸಿತು......"

—ಮ್ಯಾಕ್ಸಿಮ್ ಗೋರ್ಕಿ

# ೧ ಜಂಬದ ಮರಿ

ಬೆಸ್ಸರೇಬಿಯಾದ ಅಕ್ರಮನ್ ಹತ್ತಿರ ಕಡಲು ತೀರದಲ್ಲಿ ನಾನು ಈ ಕಥೆಗಳನ್ನು ಕೇಳಿದೆ......

ಒಂದು ಸಂಜೆ, ನಮ್ಮ ದಿನದ ದ್ರಾಕ್ಷಿ ಕೊಯ್ಯುವ ಕೆಲಸ ಮುಗಿದ ಮೇಲೆ ಎಲ್ಲರೂ ಕಡಲತೀರಕ್ಕೆ ಹೊರಟೆವು. ನನ್ನ ಜೊತೆ ಕೆಲಸ ಮಾಡುತ್ತಿದ್ದ ಮಾಲ್ಡೊವಿಯನ್ ಜನರ ಗುಂಪು, ನನ್ನನ್ನು ಮತ್ತು ಇಸರ್ಜಿಲ್ ಎಂಬ ಹೆಸರಿನ ಮುದುಕಿಯನ್ನೂ ಹಿಂದಕ್ಕೆ ಬಿಟ್ಟು ಮುಂದೆ ಸಮುದ್ರದ ಬುಡಕ್ಕೆ ಹೋದರು. ನಾವಿಬ್ಬರು ಹಿಂದೇ ದ್ರಾಕ್ಷಿಯ ಬಳ್ಳಿಮಾಡಗಳ ದಟ್ಟ ನೆಳಲಿನಲ್ಲಿ ಕೂತು, ಮುಂದೆ ಹೋಗುತ್ತಿದ್ದ ಆ ಜನ ಕಪ್ಪು ಛಾಯೆಯಾಗಿ ಇರುಳಿನ ನೀಲ ನೆರಳಿನೊಡನೆ ಬೆರೆತು ಹೋಗುತ್ತಿರುವುದನ್ನು ನೀರವವಾಗಿ ನೋಡುತ್ತಿದ್ದೆವು.

ಅವರು ಹಾಡುತ್ತ ನಗುತ್ತ ನಡೆದಿದ್ದರು. ಇಳಿಬಿಸಿಲ ಕುಡಿಯಲ್ಲಿ ಗಂಡಸರೆಲ್ಲ ಕಂಚಾಗಿದ್ದರು ; ಉದ್ದುದ್ದವಾದ ದಪ್ಪ ಮೀಸೆ, ಭುಜ ಅಲೆಯುವ ಉದ್ದ ಗುಂಗುರು ಕೂದಲುಗಳು; ಗಿಡ್ಡ ಜುಬ್ಬ, ಬುಡವಷ್ಟೆ ಬಿಗಿಯಿದ್ದ ಅಗಲಗಲ ಷರಾಯಿಗಳು. ಹೆಂಗಸರು ಹುಡುಗಿಯರು ಲವಲವಿಕೆಯಿಂದಿದ್ದರು ; ಅವರ ಚರ್ಮ ಕೂಡ ಕಂಚಿನಂತೆ ಹೊಳೆಯುತ್ತಿತ್ತು ; ಕಣ್ಣುಗಳು ನೀಲಿಗಪ್ಪಾಗಿ ಮಿನುಗುತ್ತಿದ್ದವು ; ರೇಸಿಮೆಯಂತಿದ್ದ ಉದ್ದ ಕೂದಲು, ಬೆಚ್ಚನೆಯ ಮೆಲುಗಾಳಿ ಆಟವಾಡಿ, ಉಯ್ಯಾಲಾಡುತ್ತಿತ್ತು ; ಕೂದಲಿಗೆ ಸಿಕ್ಕಿಸಿದ ಆಭರಣಗಳು ಕಿಣಿಗುಡುತ್ತಿದ್ದವು. ಗಾಳಿ ಏಕಪ್ರಕಾರವಾಗಿ ಮೆಲ್ಲ ಪ್ರವಾಹದಂತೆ ಬಯಲ ಉದ್ದಗಲವೂ ಹರಿಯುತ್ತಿತ್ತು. ಒಮ್ಮೊಮ್ಮೆ ಮಾತ್ರ, ಏನೋ ಅತಂಕ ಸಿಕ್ಕಿ ತಪ್ಪಿಸಿಕೊಳ್ಳುವಂತೆ ಕುಪ್ಪಳಿಸುವಾಗ ಅದರ ರಭಸಕ್ಕೆ ಹುಡುಗಿಯರ ತಲೆಗೂದಲು ಹುಚ್ಚುಹುಚ್ಚಾಗಿ ಹಾರಾಡುತ್ತಿದ್ದವು, ಚಿತ್ರರಮ್ಯವಾಗಿ. ಆಗ ಅವರೆಲ್ಲ ಯಾವುದೋ ಒಂದು ಅದ್ಭುತರಮ್ಯ ಕಥೆಯಲ್ಲಿ ಸುಳಿದು ನಲಿಯುವ ಯಕ್ಷಕನ್ನಿಕೆಯರ ಹಾಗೆ ಕಾಣಿ

ಸುತ್ತಿದ್ದರು. ಮೆಲ್ಲಮೆಲ್ಲಗೆ ನೆಲವನ್ನು ಆಕ್ರಮಿಸುತ್ತಿರುವ ಇರುಳಿನ ಸೆರಗು ನನ್ನ ಮನಸ್ಸಿನ ಚಿತ್ರಕಲ್ಪನೆಯ ಜೊತೆ ಕೂಡಿ ಅವರಿಗೆ ಒಂದು ನೂತನ ಶೋಭೆ ಕೊಡುತ್ತಿತ್ತು.

ಯಾರೋ ಪಿಟೀಲು ನುಡಿಸುತ್ತಿದ್ದರು.......ಮೃದುವಾದ ಮಂದಸ್ವರದಲ್ಲಿ ಹುಡುಗಿಯೊಬ್ಬಳು ಹಾಡುತ್ತಿದ್ದಳು. ನಗು ಅಲೆ ಅಲೆಯಾಗಿ ತೇಲಿಬರುತ್ತಿತ್ತು.

ಸಮುದ್ರದ ಕಟುಗಂಧದಿಂದ, ಸೂರ್ಯಾಸ್ತಕ್ಕೆ ಮುಂಚೆ ಮಳೆಯಿಂದ ತೊಯ್ದು ಪರವಶವಾದ ಭೂಮಿಯ ಜಿಡ್ಡಿನಿಂದ ಗಾಳಿ ತುಂಬಿ ತೇಲುತ್ತಿತ್ತು. ಮೋಡದ ತುಣುಕು ತುಣುಕು ಆಕಾಶದಲ್ಲಿ ಚಿತ್ರವಿಚಿತ್ರವಾದ ಆಕಾರಗಳನ್ನು ತಾಳಿ, ಸಾಗುತ್ತಿದ್ದವು—ಒಂದು ಕಡೆ ಮೃದುವಾಗಿ ನೀಲವರ್ಣದ ಸುರುಳಿ ಹೊಗೆಯ ಹಾಗೆ, ಇನ್ನೊಂದು ಕಡೆ ಹರುಕು ಹರುಕಾಗಿ ಕಪ್ಪು ಬಣ್ಣದ ಬಂಡೆಯ ಚೂರುಗಳಂತೆ. ಇವುಗಳ ನಡು ನಡುವೆ ಶ್ಯಾಮ ವರ್ಣದ ಆಕಾಶಭಾಗಗಳು ವಾತ್ಸಲ್ಯದಿಂದ ಇಣುಕುತ್ತಿದ್ದವು, ಮೈಯಲ್ಲಿ ಚಿನ್ನದ ಚುಕ್ಕಿಗಳನ್ನು ಬೆಳಗಿಸುತ್ತ. ಈ ಗದ್ದಲ, ಈ ಉನ್ಮತ್ತ ಗಂಧ, ಈ ಮೋಡಗಳು, ಈ ಜನ—ಎಲ್ಲವೂ ವಿಲಕ್ಷಣ ಸೌಂದರ್ಯದಿಂದ ಅಳಲುತ್ತಿರುವ ಹಾಗೆ ಕಾಣುತ್ತಿದ್ದವು. ಆ ಸನ್ನಿವೇಶ ಯಾವುದೋ ಒಂದು ಆಶ್ಚರ್ಯಕರವಾದ ಸನಾತನ ಕಥೆಯ ಆರಂಭದ ಹಾಗೆ ಭಾಸವಾಗುತ್ತಿತ್ತು.....ಬೆಳವಣಿಗೆಯಲ್ಲಿ ಕುಂದಿಹೋಗಿ ಅವಸಾನ ಸನ್ನಿಹಿತವಾದಂತೆ ತೋರುತ್ತಿತ್ತು!...ತೇಲಿ ಬರುತ್ತಿದ್ದ ಜನಗಳ ಪಿಸುಮಾತು ನಗೆ ದೂರ ದೂರಕ್ಕೆ ಕರಗುತ್ತಿದ್ದ ಹಾಗೆ, ಈ ಗೋಳಿನ ಸುಯ್ಯಲು ಎಲ್ಲವನ್ನೂ ತನ್ನಲ್ಲಿ ವಿಲೀನಗೊಳಿಸಿಕೊಳ್ಳುತ್ತಿತ್ತು......

"ನೀನೇಕೆ ಅವರ ಜೊತೆ ಹೋಗಲಿಲ್ಲ ?"—ಜನ ಹೋಗುತ್ತಿರುವ ಕಡೆ ಸೂಚಿಸಿ ಮುದುಕಿ ನನ್ನನ್ನು ಪ್ರಶ್ನಿಸಿದಳು.

ದೀರ್ಘಕಾಲದ ಜೀವನ ಆಕೆಯ ದೇಹವನ್ನು ಬಿಲ್ಲಿನ ಹಾಗೆ ಬಗ್ಗಿಸಿತ್ತು. ಒಮ್ಮೆ ಕಪ್ಪಾಗಿ ಹೊಳೆಯುತ್ತಿದ್ದ ಆಕೆಯ ಕಣ್ಣುಗಳು ಈಗ ಮಂದವಾಗಿದ್ದವು. ಆಕೆಯ ಒಣ ದನಿ ವಿಚಿತ್ರವಾಗಿ ತೋರುತ್ತಿತ್ತು. ಆಕೆಯ ಮಾತುಗಳು ಒರಟಾಗಿ ತೋರುತ್ತಿದ್ದವು, ಅವಳ ದೇಹದ ಮುದಿ ಮೂಳೆಗಳು ಕಟಗುಟ್ಟುತ್ತಿರುವ ಹಾಗೆ.

"ನನಗೆ ಹೋಗಬೇಕೆನ್ನಿಸಲಿಲ್ಲ !"—ನಾನು ಉತ್ತರಿಸಿದೆ.

"ಓಹ್!....ನೀವು, ರಷ್ಯನ್ನರು ಹುಟ್ಟುವಾಗಲೇ ಮುದುಕರಾಗಿಬಿಟ್ಟಿರುತ್ತೀರಿ. ನಿಮ್ಮ ಮುಖಗಳು ದೆವ್ವಗಳ ಮುಖಗಳಂತೆ ಯಾವಾಗಲೂ ಮಂಕು ಕವಿದುಕೊಂಡಿರುತ್ತವೆ......ನಮ್ಮ ಹುಡುಗಿಯರು ನಿಮ್ಮನ್ನು ಕಂಡು ಹೆದರುತ್ತಾರೆ.......ಆದರೆ ನೀನೇನೋ ಇನ್ನೂ ತರುಣನಾಗಿ ಬಲಶಾಲಿಯಾಗಿಯೇ ಇದ್ದೀಯೆ......."

ಚಂದ್ರ ಮೂಡಿ ಬರುತ್ತಿದ್ದ. ಮನುಷ್ಯನ ರಕ್ತಮಾಂಸಗಳನ್ನು ಹೀರಿಕೊಂಡು ಶ್ರೀಮಂತವಾಗಿದ್ದ ಹುಲ್ಲುಗಾವಲಿನ ಬಸಿರಿಂದ, ದೊಡ್ಡದಾಗಿ ದುಂಡಾಗಿ ರಕ್ತಕೆಂಪಾಗಿ—ಮೇಲೇರುತ್ತಿದ್ದ. ಚಂದ್ರ ಮೇಲೇರಿದಂತೆ ವೈನ್ ಬಳ್ಳಿಮಾಡಗಳ ನೆರಳುಗಳು

ನಮ್ಮ ಮೇಲೆ ಕವಿಯುತ್ತಿದ್ದುವು. ನಾವು ಆ ನೆಳಲು ಬೆಳಕಿನ ಬಲೆಯಲ್ಲಿ ಸಿಲುಕಿದವರ ಹಾಗೆ ಕಾಣುತ್ತಿದ್ದೆವು. ನಮ್ಮ ಎಡಭಾಗದ ವಿಶಾಲ ಹುಲ್ಲುಗಾವಲಿನಲ್ಲಿ ಮೋಡಗಳ ನೆರಳುಗಳು ಸಂಚಾರ ಹೊರಟಿದ್ದುವು. ಚಂದ್ರನ ನೀಲಕಾಂತಿಯಿಂದ ದೀಪ್ತವಾದ ಮೋಡಗಳು ಸ್ಫಟಿಕದಂತೆ ಸ್ವಚ್ಛವಾಗಿ ಬಾನನ್ನು ಅಲೆಯುತ್ತಿದ್ದುವು.

"ನೋಡು, ನೋಡು........ಅಲ್ಲಿ......ಲಾರಾ !......ಹ್ಞಾ, ಅದೇ !"

ಇಸರ್ಜಿಲ್ ತನ್ನ ಮುದಿಕೈಯ ಕೊಂಡಿಬೆರಳುಗಳಿಂದ ಸೂಚಿಸಿದ ಕಡೆಗೆ ತಿರುಗಿ ನೋಡಿದೆ. ಅಲ್ಲಿ ನೆಲದ ಮೇಲೆ ಮೋಡಗಳ ನೆರಳು ಗುಂಪು ಗುಂಪಾಗಿ ಓಡುತ್ತಿದ್ದವು. ಅವುಗಳ ಮಧ್ಯೆ ಒಂದು ದೊಡ್ಡ ನೆರಳು ಉಳಿದವಕ್ಕಿಂತಲೂ ಕಪ್ಪಾಗಿ ವೇಗದಿಂದ ಓಡು ತ್ತಿತ್ತು. ಬಾನಿನಲ್ಲಿ ತೇಲಿಹೋಗುತ್ತಿದ್ದ ಒಂದು ದಟ್ಟವಾದ ಮೋಡದ ರಾಶಿಯಿಂದ ಬಿದ್ದ ನೆರಳು ಅದು.

"ನನಗೆ ಯಾರೂ ಕಾಣಿಸುತ್ತಿಲ್ಲ !" ಎಂದೆ ನಾನು.

"ನಿನ್ನ ಕಣ್ಣುಗಳೋ ನನ್ನ ಮುದಿಗಣ್ಣುಗಳಿಗಿಂತಲೂ ಕುರುಡು !........ನೋಡು ಅಲ್ಲಿ........ಮೇಲೆ......ದಟ್ಟವಾಗಿ ಕಪ್ಪಾಗಿ ನೆಲದ ಮೇಲೆ ಓಡುತ್ತಿದೆ !"

ನಾನು ಮತ್ತೆ ನೋಡಿದೆ. ನೆರಳುಗಳಲ್ಲದೆ ಮತ್ತೇನೂ ಅಲ್ಲಿ ಕಾಣಿಸುತ್ತಿರಲಿಲ್ಲ.

"ಓ ! ಆ ನೆರಳುಗಳೇನು ?.......ಲಾರಾ ?" ಎಂದು ಹೇಳಿದೆ,

"ಹೌದು, ಅವನೇ ಲಾರಾ !.......ಈಗ ಆತ ಕೇವಲ ನೆರಳಾಗಿ ಮಾತ್ರ ಉಳಿದಿ ದ್ದಾನೆ. ಸಾವಿರಾರು ವರ್ಷಗಳಿಂದ ಆತ ಹೀಗೇ ನೆರಳಾಗಿಯೇ ಬದುಕುತ್ತಿದ್ದಾನೆ ; ಕಂಡ ಕಂಡಲ್ಲಿ ಸುತ್ತುತ್ತಿದ್ದಾನೆ. ಅವನ ದೇಹದ ರಕ್ತ ಮೂಳೆಗಳನ್ನು ಸೂರ್ಯ ಒಣಗಿಸಿ ಬಿಟ್ಟಿದ್ದಾನೆ. ಅವನ ಅವಶೇಷವನ್ನು ಗಾಳಿ ದೂಳಿನಂತೆ ಹಾರಿಸಿ ಕೊಂಡೊಯ್ಯುತ್ತದೆ ........ಅತಿಯಾದ ಅಹಂಕಾರಕ್ಕೆ ದೇವರು ಮನುಷ್ಯನನ್ನು ಹೇಗೆ ಶಿಕ್ಷಿಸುತ್ತಾನೆ, ನೋಡಿದೆಯಾ ?"

"ನನಗೆ ಅರ್ಥವಾಗುವುದಿಲ್ಲ. ಅದೇನು ಕಥೆ ? ಏನಾಯಿತು ಹೇಳು"—ನಾನು ಆಕೆಯನ್ನು ದೈನ್ಯದಿಂದ ಬೇಡಿದೆ. ಆ ಹುಲ್ಲುಗಾವಲಿನಲ್ಲೆ ಹುಟ್ಟಿ ಬೆಳೆದ ವಿಚಿತ್ರ ಕಥೆ ಯನ್ನು ಕೇಳುವ ಕುತೂಹಲ ಉಕ್ಕುತ್ತಿತ್ತು ನನಗೆ.

ಆಕೆ ಆ ಕಥೆಯನ್ನು ಹೇಳಿದಳು.

"ಅನೇಕ ಸಾವಿರ ವರ್ಷಗಳ ಹಿಂದೆ ನಡೆದ ಕಥೆ ಅದು. ಈ ಸಮುದ್ರದ ಆಚೆಗೆ, ನೆಲದ ತುತ್ತತುದಿಯಲ್ಲಿ ಒಂದು ಪ್ರಾಂತ್ಯವಿದೆ. ಸೂರ್ಯ ಅಲ್ಲಿಂದಲೇ ಹುಟ್ಟಿ ಬರುತ್ತಾನೆ. ಅಲ್ಲಿ ಒಂದು ದೊಡ್ಡ ನದಿ ಹರಿಯುತ್ತದೆ. ಸೂರ್ಯನ ಶಾಖ ಹೇಳಲಾರದಷ್ಟು ಅಲ್ಲಿ. ಆ ಪ್ರಾಂತ್ಯದಲ್ಲಿ ಗಿಡಮರಗಳೂ ಹೇರಳವಾಗಿವೆ. ಆ ಗಿಡ ಮರಗಳ ಒಂದೊಂದು ಎಲೆಯೂ ನೆರಳು ಚೆಲ್ಲಿ ಅಲ್ಲಿನ ಜನರಿಗೆ ತಂಪುಮಾಡಿಕೊಡುತ್ತದೆ.

"ಭೂಮಿ ಅಲ್ಲಿ ಅಷ್ಟು ಸಂಪದ್ಯುಕ್ತವಾಗಿದೆ !

“ಒಂದಾನೊಂದು ಕಾಲದಲ್ಲಿ ಆ ಪ್ರಾಂತ್ಯದಲ್ಲಿ ಒಂದು ಬಲಿಷ್ಠವಾದ ಜನಾಂಗ ವಾಸವಾಗಿತ್ತು. ಅವರು ದನಕರುಗಳನ್ನು ಸಾಕಿಕೊಂಡು ಅದರಿಂದಲೇ ಜೀವಿಸುತ್ತಿದ್ದರು. ತಮ್ಮ ಶಕ್ತಿಯನ್ನು ಮತ್ತು ಪೌರುಷವನ್ನು ಬೇಟೆಯಲ್ಲಿ ಕಳೆಯುತ್ತಿದ್ದರು. ಬೇಟೆಯಾದ ಮೇಲೆ ಔತಣ ಮಾಡುತ್ತಿದ್ದರು. ಔತಣವಾದ ಮೇಲೆ ಹಾಡುತ್ತ ಕುಣಿಯುತ್ತ ಹುಡುಗಿಯರೊಡನೆ ಲಲ್ಲೆಯಾಡುತ್ತ ದಿನ ಕಳೆಯುತ್ತಿದ್ದರು.

“ಹೀಗೆ ಒಂದು ದಿನ ಹಬ್ಬದ ಔತಣ ನಡೆಯುತ್ತಿದ್ದಾಗ, ಮುಗಿಲಿನಲ್ಲಿ ಹಾರಾಡುತ್ತಿದ್ದ ಒಂದು ದೊಡ್ಡ ಹದ್ದು ನೆಲಕ್ಕಿಳಿದು ಬಂದು, ಇರುಳಿನಂತೆ ಲಾವಣ್ಯಮಯಿಯಾಗಿದ್ದ ಕಪ್ಪುಗೂದಲಿನ ಚೆಲುವಿ ಹುಡುಗಿಯೊಬ್ಬಳನ್ನು ಎತ್ತಿಕೊಂಡು ಹಾರಿ ಹೋಯಿತು. ಜನಗಳು ಕಳವಳದಿಂದ ಬಿಲ್ಲು ಬಾಣಗಳನ್ನು ಹಿಡಿದು ಆ ಹದ್ದಿಗೆ ಹೊಡೆಯತೊಡಗಿದರು. ಆದರೆ ಅವರ ಬಿಲ್ಲುಗಳು—ಪಾಪ!—ಹದ್ದನ್ನು ತಾಗದೆಯೇ ನೆಲಕ್ಕೆ ಬಿದ್ದವು. ಆಮೇಲೆ ಆಕೆಯನ್ನು ಅರಸುವ ಸಲುವಾಗಿ ಜನರು ದಿಕ್ಕು ದಿಕ್ಕಿಗೂ ಹೊರಟರು. ಎಷ್ಟು ಹುಡುಕಿದರೂ ಅವರ ಪ್ರಯತ್ನ ಸಾರ್ಥಕವಾಗಲಿಲ್ಲ. ಹುಡುಗಿಯ ಸುಳಿವೂ ಕಾಣಲಿಲ್ಲ......ದಿನ ಕಳೆದ ಹಾಗೆ ಎಲ್ಲವೂ ಮರೆತುಹೋಗುತ್ತದೆ. ಅಂತೆಯೇ ಆ ಜನ ಬರಬರುತ್ತ ಆಕೆಯನ್ನು ಮರೆತುಬಿಟ್ಟರು.”

ಮುದುಕಿ ನಿಟ್ಟುಸಿರು ಬಿಟ್ಟು ನೀರವವಾದಳು. ಆಕೆಯ ಸ್ವರ ವಿಚಿತ್ರವಾಗಿತ್ತು—ಯುಗಯುಗಗಳ ವಿಸ್ಮೃತಿಯೆಲ್ಲ ಬಂದು ನೆರಳು ನೆನಪುಗಳನ್ನು ಕೆರಳಿಸಿ ದೂರಿಡುತ್ತಿರುವಂತೆ! ತನ್ನ ದಂಡೆಯಲ್ಲಿ ಹುಟ್ಟಿ ಬೆಳೆದ ಈ ಐತಿಹ್ಯವನ್ನು ಸಮರ್ಥಿಸುವ ಹಾಗೆ ಸಮುದ್ರದ ಮೃದು ಸ್ವರವೂ ಆಕೆಯ ಕಥೆಗೆ ದನಿಗೂಡಿಸುತ್ತಿತ್ತು. ಕೊಂಚ ಹೊತ್ತು ಮೌನವಾಗಿದ್ದು ಆಕೆ, ಮತ್ತೆ ತನ್ನ ಕಥೆಯನ್ನು ಮುಂದುವರಿಸಿದಳು.

“ಇಪ್ಪತ್ತು ವರ್ಷಗಳ ದೀರ್ಘಕಾಲದ ಮೇಲೆ ಆ ಹುಡುಗಿ ತಾನಾಗಿಯೇ ಅಲ್ಲಿಗೆ ಮರಳಿ ಬಂದಳು. ಆ ಹೊತ್ತಿಗೆ ಆಕೆ ದೇಹ ಸವೆದ ಮುದುಕಿಯಾಗಿದ್ದಳು. ಆಕೆಯ ಜೊತೆಗೆ ಹರೆಯದ ಹುಡುಗನೊಬ್ಬ ಬಂದಿದ್ದ. ಈಕೆ ಇಪ್ಪತ್ತು ವರ್ಷಗಳ ಹಿಂದೆ ಇದ್ದ ಹಾಗೆ, ಅದೇ ಚೆಲುವನ್ನು ತನ್ನಲ್ಲಿ ಮೈಗೂಡಿಸಿಕೊಂಡಿದ್ದಾನೋ ಎನ್ನುವಂತೆ ತೋರುತ್ತಿದ್ದ ಆ ಹುಡುಗ. ಜನಗಳಿಗೆ ಆಶ್ಚರ್ಯವಾಯಿತು. ಇಷ್ಟು ದಿನ ಎಲ್ಲಿ ಹೋಗಿದ್ದಳೆಂದು ಅವರೆಲ್ಲ ಆಕೆಯನ್ನು ಪ್ರಶ್ನಿಸಿದರು. ತಾನು ಹದ್ದಿನೊಡನೆ ಬಹುದೂರದ ಪರ್ವತ ಪ್ರಾಂತ್ಯಗಳಿಗೆ ಹೋಗಿದ್ದೆನೆಂದೂ, ಅಲ್ಲಿ ಆ ಹದ್ದಿನ ಮಡದಿಯಾಗಿ ತಾನು ಬಾಳುತ್ತಿದ್ದೆನೆಂದೂ ಆಕೆ ಹೇಳಿದಳು. ಜೊತೆಗಿದ್ದ ಹುಡುಗ ಆಕೆಯ ಮಗ. ಆಕೆಯ ಗಂಡನಾಗಿದ್ದ ಹದ್ದು ತೀರಿಕೊಂಡಿತಂತೆ. ಮುಪ್ಪಿನಿಂದ ಕೃಶವಾಗುತ್ತ ಬಂದು, ಒಂದು ಸಲ ಆಕಾಶದ ಎತ್ತರದಲ್ಲಿ ಹಾರುತ್ತಿದ್ದಾಗ ರೆಕ್ಕೆ ಮುದುರಿ, ಬೆಟ್ಟದ ಬಂಡೆಗಳ ಮೇಲೆ ಬಿದ್ದು ಸತ್ತುಹೋಯಿತಂತೆ....

“ಅಲ್ಲಿನ ಜನ ಆಶ್ಚರ್ಯದಿಂದ ಆ ಹದ್ದಿನ ಮಗನನ್ನು ಸೂಕ್ಷ್ಮವಾಗಿ ಪರೀಕ್ಷಿ

ಸಿದರು. ಆತ ತಮಗಿಂತ ಸ್ವಲ್ಪವೂ ಬೇರೆಯಾಗಿರಲಿಲ್ಲ. ಆದರೆ ಆತನ ಕಣ್ಣುಗಳು ಮಾತ್ರ, ಆ ಪಕ್ಷಿರಾಜನ ಕಣ್ಣುಗಳ ಹಾಗೇ, ಹೆಮ್ಮೆಯಿಂದ ಕೋಡುತ್ತಿದ್ದುವು. ಅವರು ಆತನನ್ನು ಮಾತನಾಡಿಸಿದರೆ ಮನಸ್ಸು ಬಂದೀತೋ ಆತ ಉತ್ತರ ಕೊಡುತ್ತಿದ್ದ, ಇಲ್ಲ ದಿದ್ದರೆ ಮೌನವಾಗಿ ನಿಂತುಬಿಡುತ್ತಿದ್ದ. ಮಾತಾಡುವಾಗ ಕೂಡ, ಪಡೆಯ ಹಿರಿಯರ ಜೊತೆಗೂ ಸರಿಸಮಾನನೆನ್ನುವಂತೆ ಹೆಮ್ಮೆಯಿಂದ ಮಾತಾಡುತ್ತಿದ್ದ. ಇದನ್ನು ಕಂಡು ಆ ಜನರಿಗೆ ಅವಮಾನವಾದಂತೆ ತೋರಿತು. 'ನೀನಿನ್ನೂ ಮಸೆಯುದಿರುವ ಗರಿ ಹುಟ್ಟದ ಅಂಬು ; ನಿನ್ನಂಥ, ಏಕೆ ನಿನಗಿಂತ ಎರಡರಷ್ಟು ವಯಸ್ಸಾಗಿರುವಂಥ ಸಾವಿರಾರು ಜನ ಗೌರವದಿಂದ ನಮ್ಮ ಮಾತು ಕೇಳುತ್ತಾರೆ' ಎಂದು ಪ್ರತಿಭಟಿಸಿದರು ಹಿರಿಯರು. ಆತ ಇದಕ್ಕೆ ಹೆದರಲಿಲ್ಲ. ತನಗೆ ಸಮಾನರಾದವರು ಜಗತ್ತಿನಲ್ಲಿಯೇ ಇಲ್ಲ ಎಂದು ಗರ್ವ ದಿಂದ ತಿರಸ್ಕಾರಮಾಡಿ ನುಡಿದ. ತನಗೆ ಗೌರವಕೊಡುವವರನ್ನು ಮಾತ್ರ ಗೌರವಿಸುವು ದಾಗಿ ತಿಳಿಸಿದ. ಜನಗಳ ಕೋಪ ಮಿತಿಮೀರಿತು. ಸಿಟ್ಟಿನಿಂದ ಅವರು ಅರಚಿದರು :

'ನಮ್ಮ ಮಧ್ಯದಲ್ಲಿ ಇವನು ಇರಕೂಡದು ! ತನಗೆ ಇಷ್ಟ ಬಂದಲ್ಲಿಗೆ ತೊಲಗಿ ಹೋಗಲಿ !'

"ಆತ ಗಹಗಹಿಸಿ ನಕ್ಕು ತನಗೆ ಇಷ್ಟವಾದಲ್ಲಿಗೇ ನಡೆದ—ಎಂದರೆ, ಅಲ್ಲಿಯೇ ತನ್ನನ್ನು ಕುತೂಹಲದಿಂದ ನೋಡುತ್ತ ನಿಂತಿದ್ದ ಒಬ್ಬ ಚೆಲುವಿಯಾದ ಹುಡುಗಿಯ ಹತ್ತಿರ ನೇರವಾಗಿ ಹೋಗಿ ಆಕೆಯನ್ನು ಅಪ್ಪಿಕೊಂಡ. ಈ ತರುಣನನ್ನು ಬೈದು ನಿಂದಿ ಸಿದ ಹಿರಿಯರಲ್ಲಿ ಒಬ್ಬನ ಮಗಳಾಗಿದ್ದಳು ಆ ಹುಡುಗಿ. ತರುಣ ಚೆಲುವನಾಗಿದ್ದರೂ ಆ ಹುಡುಗಿ ತನ್ನ ತಂದೆಗೆ ಹೆದರಿ ಆತನನ್ನು ಅತ್ತ ದೂಡಿದಳು. ಆತನನ್ನು ಸರಿಸಿ ಓಡ ತೊಡಗಿದಳು. ಆದರೆ ಆ ತರುಣ ಆಕೆಯನ್ನು ಹಿಂಬಾಲಿಸಿ ಹೋಗಿ ಅವಳ ಮೇಲೆ ಎರಗಿದ ; ಆಕೆ ನೆಲಕ್ಕೆ ಕುಸಿದು ಬೀಳುತ್ತಿದ್ದಂತೆ ಅವಳ ಎದೆಯ ಮೇಲೆ ಕೂತು ಗುದ್ದ ತೊಡಗಿದ. ಆಕೆಯ ಬಾಯಿಂದ ನೆತ್ತರು ಚಿಮ್ಮಿತು. ಆ ಹುಡುಗಿ ಏದುತ್ತ ಹಾವಿ ನಂತೆ ಮೈ ತಿರುಪಿ ಸತ್ತಳು.

"ಇದನ್ನೆಲ್ಲ ನೋಡುತ್ತ ಆ ಜನ ಹೆದರಿಕೆಯಿಂದ ಬೆರಗುಪಟ್ಟು ನಿಂತಿದ್ದರು. ಈ ಬಗೆಯಲ್ಲಿ ಹೆಣ್ಣಿನ ಪೈಶಾಚಿಕ ಕೊಲೆಯಾದದ್ದು ಅವರಲ್ಲಿ ಇದೇ ಮೊದಲು. ತೆರೆದ ಕಣ್ಣಿನಿಂದ ಬಾಯಿಯಲ್ಲಿ ನೆತ್ತರು ಹರಿಸುತ್ತ ಸತ್ತು ನೆಲಕ್ಕುರುಳಿರುವ ಆ ಹುಡುಗಿ ಒಂದು ಕಡೆ, ಬದಿಯಲ್ಲೇ ಗರ್ವದಿಂದ ಎಲ್ಲರನ್ನೂ ಎದುರಿಸಿ ನಿಂತ ಆ ಯುವಕ ಇನ್ನೊಂದು ಕಡೆ—ಆ ಭಯಾನಕ ದೃಶ್ಯವನ್ನು ನೋಡುತ್ತ ಜನ ದಂಗುಬಡಿದು ನಿಂತಿ ದ್ದರು. ಇಷ್ಟಾದರೂ ತಾನು ಅಪರಾಧಿ ಎನ್ನುವ ಭಾವನೆ ಆ ತರುಣನಲ್ಲಿ ಸುಳಿವ ಹಾಗೆ ಕಾಣಲಿಲ್ಲ. ಸ್ವಲ್ಪ ಹೊತ್ತು ಕಳೆದ ಮೇಲೆ ಜನರಿಗೆ ಆ ಬೆರಗಿನಿಂದ ಎಚ್ಚರವಾಯಿತು. ಎಲ್ಲರೂ ಕೂಡಿ ಆತನನ್ನು ಬಿಗಿದು ಕಟ್ಟಿ ನೆಲಕ್ಕೆ ಉರುಳಿಸಿದರು. ಅವನನ್ನು ಅಲ್ಲಿಯೇ ಕೊಂದುಬಿಟ್ಟರೆ ತೃಪ್ತಿಯಾಗದೆಂದು ತೋರಿತು ಅವರಿಗೆ".

ರಾತ್ರಿ ಕಾಲಿರಿಸುತ್ತಿತ್ತು. ವಿಲಕ್ಷಣವಾದ ಮಧುರ ಸ್ವರಗಳು ಗಾಳಿಯಲ್ಲಿ ಅಲೆಯುತ್ತಿದ್ದವು. ಹುಲ್ಲುಗಾವಲಿನಲ್ಲಿ ಅಳಿಲುಗಳು ಸಿಳ್ಳು ಹಾಕಲು ಮೊದಲಿಟ್ಟಿದ್ದವು. ದ್ರಾಕ್ಷಿ ಎಲೆಗಳ ನಡುವಿನಿಂದ ಜೀರುಂಡೆಗಳ ಕೀರಲು ಧ್ವನಿ ತೂರಿಬರುತ್ತಿತ್ತು. ಮರದ ಎಲೆಗಳು ನಿಟ್ಟುಸಿರು ಬಿಡುತ್ತ ಪಿಸುಗುಟ್ಟಿಕೊಳ್ಳುತ್ತಿದ್ದವು. ಚಂದ್ರ ಮೇಲಕ್ಕೆ ಏರಿ ಬರುತ್ತಿದ್ದ ಹಾಗೆ ರಕ್ತಗೆಂಪಿನ ಬಣ್ಣ ಸರಿದು ಬಿಳಿಚಿಕೊಳ್ಳುತ್ತಿದ್ದ. ಇರುಳಿನ ನೀಲ ಜವನಿಕೆ ಬಯಲನ್ನು ಆವರಿಸುತ್ತಿತ್ತು...... ಮುದುಕಿಯ ಕಥೆ ಸಾಗುತ್ತಿತ್ತು......

"ಅವರೆಲ್ಲರೂ ಆತನ ಘೋರ ಅಪರಾಧಕ್ಕೆ ತಕ್ಕ ಶಿಕ್ಷೆಯನ್ನು ನಿರ್ಣಯಿಸಲು ಕೂಡಿಕೊಂಡರು........ಕುದುರೆಗಳಿಂದ ತುಳಿಸಿ ಆತನನ್ನು ಚೂರು ಚೂರು ಮಾಡಬೇಕೆಂದು ಕೆಲವರು ಸೂಚಿಸಿದರು ; ಕೆಲವರು ಅವನನ್ನು ಆಳಿಗೊಂದರಂತೆ ಅಂಬಿನಿಂದ ಇರಿದು ಸಾಯಿಸಬೇಕು ಎಂದರು. ಎಲ್ಲರಿಗೂ ಸಮ್ಮತವಾದ ಒಂದು ನಿರ್ಧಾರ ಹೊಳೆಯಲಿಲ್ಲ. ಬೆಂಕಿಯಲ್ಲಿ ಆತನನ್ನು ಬೇಯಿಸಬೇಕೆಂಬ ಸೂಚನೆ ಬಂದಿತು. ಆದರೆ ಆ ಹೊಗೆಯಲ್ಲಿ ಆತ ನರಳಾಡುತ್ತಿರುವುದು ಕಾಣಿಸದ್ದಕ್ಕಾಗಿ ತಮಗೆ ತೃಪ್ತಿಯಾಗದೆಂದು ಅನೇಕರು ಆ ಸೂಚನೆಯನ್ನು ವಿರೋಧಿಸಿದರು.........ಹೀಗೆ ಅನೇಕ ಸೂಚನೆಗಳು ಬಂದವು ; ಒಂದೂ ತೃಪ್ತಿಕರವೆನಿಸದೆ ಎಲ್ಲವೂ ತಿರಸ್ಕೃತವಾದವು. ಜನಗಳು ಚರ್ಚಿಸುತ್ತ ಕುಳಿತಿರುವಾಗ, ಆತನ ತಾಯಿ ಮೊಣಕಾಲೂರಿ ದೈನ್ಯದಿಂದ ನೋಡುತ್ತಿದ್ದಳು. ಜನರ ಕರುಣೆಯನ್ನು ಬೇಡಲು ನೇರವಾಗಿ ಆಕೆಗೆ ಮಾತುಗಳೂ ಇರಲಿಲ್ಲ, ಕಣ್ಣೀರೂ ಇರಲಿಲ್ಲ. ತಾಸು ತಾಸು ಹೀಗೆಯೇ ಚರ್ಚೆ ಸಾಗಿತು. ನಿರ್ಧಾರ ಮಾತ್ರ ಹೊರಡಲಿಲ್ಲ........ಕೊನೆಯಲ್ಲಿ ಒಬ್ಬ ಹೇಳಿದ :

'ಆತ ಏಕೆ ಹೀಗೆ ಮಾಡಿದನೆಂದು ಅವನನ್ನೇ ಕೇಳೋಣ !'

ಅವರೆಲ್ಲ ಕೂಡಿ ಆತನನ್ನು ಕೇಳಿದರು.

'ಮೊದಲು ನನ್ನ ಕಟ್ಟುಗಳನ್ನು ಬಿಚ್ಚಬೇಕು, ಅಲ್ಲಿಯ ತನಕ ನಾನು ಮಾತಾಡುವುದಿಲ್ಲ !' ಎಂದ ಆ ತರುಣ.

ಅವರು ಕಟ್ಟು ಬಿಚ್ಚಿದರು. ಆತ ತನ್ನ ಗುಲಾಮರನ್ನು ಕೇಳುವಂತೆ ಅಧಿಕಾರವಾಣಿಯಿಂದ ಕೇಳಿದ :

'ಹ್ಞ ! ಈಗ ನಿಮಗೆ ಏನು ಬೇಕು ?—ಹೇಳಿ !'

'ಆಗಲೇ ಹೇಳಿದ್ದೇವಲ್ಲ'—ಅಲ್ಲಿ ಕೂಡಿದವರಲ್ಲಿ ಒಬ್ಬ ಜಾಣ ಉತ್ತರಿಸಿದ.

'ನಾನು ಹಾಗೆ ಮಾಡಿದ್ದಕ್ಕೆ ನಿಮಗೆ ಕಾರಣ ಕೊಡುವ ಅಗತ್ಯವೇನು ?'

'ನಮಗೆ ತಿಳಿಯುವ ಬಗ್ಗೆ.......ಕೇಳು, ಜಂಬದ ಮರಿ, ನೀನು ಸುಮ್ಮನೆ ಅನ್ಯಾಯವಾಗಿ ಸಾಯುತ್ತೀಯೆ !.........ಸರಿಯಾಗಿ ಬಿಡಿಸಿ ಹೇಳು, ನೀನೇಕೆ ಹಾಗೆ ಮಾಡಿದೆ ಎಂದು. ನೀನೂ ಬದುಕುತ್ತೀಯೆ, ನಮಗೂ ನಿನ್ನ ವರ್ತನೆ ಅರ್ಥವಾಗುತ್ತದೆ !'

'ಆಗಲಿ, ಹೇಳುತ್ತೇನೆ......ನಾನೇಕೆ ಹಾಗೆ ಮಾಡಿದೆನೆಂದು ನನಗೇ ತಿಳಿಯದು ......ಬಹುಶಃ ಆಕೆ ನನ್ನನ್ನು ತಿರಸ್ಕರಿಸಿದಳೆಂದು ನಾನು ಅವಳನ್ನು ಕೊಂದಿರಬೇಕು ......ನಾನು ಆಕೆಯನ್ನು ಬಯಸಿದೆ!'

'ಆದರೆ ಆಕೆ ನಿನ್ನವಳಲ್ಲ!'—ಒಬ್ಬ ಹೇಳಿದ.

'ನೀವು ನಿಮ್ಮ ವಸ್ತುಗಳನ್ನು ಮಾತ್ರವೇ ಬಳಸುತ್ತೀರೇನು—......... ಮನುಷ್ಯನ ಬಳಿ ಸ್ವಂತವಾಗಿ ಇರುವುದು ನಾಲಗೆ, ಕೈಕಾಲು—ಅಷ್ಟೆ...........ಆದರೆ ಮನುಷ್ಯರು ತಮ್ಮದಲ್ಲದ ದನಕರುಗಳನ್ನು, ಭೂಮಿಯನ್ನು, ಹೆಣ್ಣನ್ನು, ಇನ್ನೂ ಅನೇಕ ವಸ್ತುಗಳನ್ನು ತಮ್ಮ ಸಲುವಾಗಿ ಇಟ್ಟುಕೊಳ್ಳುವುದಿಲ್ಲವೇ ?'

'ಅವುಗಳನ್ನೆಲ್ಲ ಮನುಷ್ಯ ತನ್ನ ಶಕ್ತಿಯಿಂದ ಬುದ್ಧಿಯಿಂದ, ಕೆಲವು ಸಲ ಪ್ರಾಣ ವನ್ನಾದರೂ ಕೊಟ್ಟು ಪಡೆದುಕೊಂಡಿರುತ್ತಾನೆ'—ಎಂದರು ಜನ. ಆತ ಮಾತ್ರ, ತಾನು ಎಲ್ಲವನ್ನೂ ಪಡೆಯಲು ಅರ್ಹನೆಂದು ಗರ್ವದಿಂದಲೇ ಹೇಳಿದ.

"ಬಹಳ ಹೊತ್ತು ಜನ ಇದೇ ರೀತಿ ಅವನ ಸಂಗಡ ವಾದ ಮಾಡಿದರು. ಈ ಭೂಮಿಯಲ್ಲಿ ತಾನೇ ಮುಖ್ಯನೆಂದು, ಉಳಿದವರ ಬಗ್ಗೆ ಆತ ಸ್ವಲ್ಪವೂ ಯೋಚಿಸುವು ದಿಲ್ಲವೆಂಬುದು ಅವರಿಗೆ ಅರ್ಥವಾಯಿತು. ಅವನಲ್ಲಿ ತುಂಬಿ ತುಳುಕುತ್ತಿದ್ದ ಗರ್ವವನ್ನು ಕಂಡು ಅವರಿಗೆ ಭಯವೆನಿಸಿತು........ಆತ ತಮ್ಮಂತೆ ಯಾವುದೊಂದು ಕುಲಕ್ಕೇ ಸೇರಿ ದವನಲ್ಲ. ಪರದೇಶಿ!......ತನ್ನದಾದ ಕುಲವಿಲ್ಲ, ಹಸುಗಳಿಲ್ಲ, ಹೆಣ್ಣಿಲ್ಲ,—ಯಾವುದೂ ಇಲ್ಲ!

"ಇಷ್ಟಾದ ಮೇಲೆ ಮತ್ತೆ ಆತನಿಗೆ ಯಾವ ಶಿಕ್ಷೆ ವಿಧಿಸುವುದೆಂದು ಅವರೆಲ್ಲ ಯೋಚಿಸತೊಡಗಿದರು. ಈ ಸಲ ಮಾತ್ರ ಹೆಚ್ಚು ಚರ್ಚೆಯಾಗಲಿಲ್ಲ. ಇಷ್ಟು ಹೊತ್ತು ನೀರವವಾಗಿಯೇ ಕೂತಿದ್ದ ಒಬ್ಬ ಬುದ್ಧಿವಂತ ಆಗ ಹೇಳಿದ :

'ನಿಲ್ಲಿ! ಅವನಿಗೆ ಯೋಗ್ಯವಾದ ಶಿಕ್ಷೆಯಿದೆ. ಭಯಂಕರ ಶಿಕ್ಷೆ! ಸಾವಿರ ವರ್ಷ ಕೂತು ಯೋಚಿಸಿದರೂ ನೀವು ಅಂಥ ಭಯಂಕರವಾದ ಶಿಕ್ಷೆಯನ್ನು ಕಾಣಲಾರಿರಿ! ಆ ಶಿಕ್ಷೆ ಆತನಲ್ಲಿಯೇ ಇದೆ. ಆತನನ್ನು ಸುಮ್ಮನೆ ಸ್ವತಂತ್ರವಾಗಿ ಬಿಟ್ಟು ಬಿಡೋಣ. ಅದೇ ಆತನಿಗೆ ಶಿಕ್ಷೆಯಾಗುತ್ತದೆ!'

"ಆ ಬುದ್ಧಿವಂತ ಇಷ್ಟು ಹೇಳುವ ಹೊತ್ತಿಗೆ ಒಂದು ವಿಚಿತ್ರ ನಡೆಯಿತು. ಆಕಾಶ ದಲ್ಲಿ ಒಂದೇ ಒಂದು ಮೋಡದ ಸುಳಿವಿಲ್ಲದಿದ್ದರೂ ಎಲ್ಲಿಂದಲೊ ಗುಡುಗು ಅಬ್ಬರಿಸಿತು. ಆ ಬುದ್ಧಿವಂತನ ಮಾತನ್ನು ಆ ದಿವ್ಯ ಧ್ವನಿ ಅನುಮೋದಿಸಿಬಿಟ್ಟಿತು. ಎಲ್ಲರೂ ಅದಕ್ಕೆ ಸಮ್ಮತಿಸಿ ತಲೆಬಾಗಿ ತಮ್ಮ ತಮ್ಮ ಮನೆಗಳ ಕಡೆ ಹೊರಟರು. ಆ ತರುಣ ಜನಗಳನ್ನು ನೋಡಿ ವಿಚಿತ್ರವಾಗಿ ಗಹಗಹಿಸಿ ನಗಲಾರಂಭಿಸಿದ. ಜನ ಆತನನ್ನು 'ಲಾರಾ' ಎಂದು ಕರೆದರು. 'ಲಾರಾ'—ಎಂದರೆ ಅವರ ಭಾಷೆಯಲ್ಲಿ 'ಬಹಿಷ್ಕೃತನಾದವನು' ಎಂದು ಅರ್ಥ. ತನ್ನ ತಂದೆಯಂತೆಯೇ ಸ್ವತಂತ್ರನಾದ ಆ ತರುಣ ಗಹಗಹಿಸಿ ನಗುತ್ತಿದ್ದ........ತನ್ನ

ತಂದೆ ಮನುಷ್ಯಕುಲದವನಲ್ಲ, ಆದರೆ ತಾನು ಮನುಷ್ಯಕುಲದಲ್ಲಿ ಹುಟ್ಟಿದ್ದೇನೆ ಎಂಬುದು ಆತನ ಗಮನಕ್ಕೇ ಬರಲಿಲ್ಲ......

"ಹಾಗೆಯೇ ಆತ ಸ್ವಚ್ಛಂದವಾಗಿ ಇರಲು ತೊಡಗಿದ. ಜನಗಳ ಬಿಡಾರಕ್ಕೆ ನುಗ್ಗಿ ಅವರ ದನಕರುಗಳನ್ನು, ಹುಡುಗಿಯರನ್ನು, ಒಟ್ಟಿನಲ್ಲಿ ಬೇಕೆನಿಸಿದ್ದೆಲ್ಲವನ್ನೂ ಹೊತ್ತು ತರುತ್ತಿದ್ದ. ಜನ ಬಿಲ್ಲುಬಾಣಗಳಿಂದ ಹೊಡೆದರೆ ಆತನಿಗೆ ನಾಟುತ್ತಿರಲಿಲ್ಲ. ಅವನ ಮೈ ಉಕ್ಕಿನ ಕವಚದ ಹಾಗಿತ್ತು. ಅದೇ ಆತನಿಗೆ ರಕ್ಷೆಯೂ, ಶಿಕ್ಷೆಯೂ—ಎರಡೂ ಆಗಿತ್ತು : ಆತ ಸಾಯುವಂತೆಯೇ ಇರಲಿಲ್ಲ ! ಆತ ತುಂಬ ಚಟುವಟಿಕೆಯಾಗಿದ್ದ, ಬಲಶಾಲಿಯಾಗಿದ್ದ, ಜೊತೆಗೆ ಕ್ರೂರಿಯೂ ದುರಾಸೆಯ ಸುಲಿಗೆಗಾರನೂ ಆಗಿದ್ದ. ಆದರೆ ಆತ ಜನಗಳೆದುರು ಮುಖಗೊಟ್ಟು ಮಾತನಾಡುತ್ತಿರಲಿಲ್ಲ. ಯಾವಾಗಲೂ ಜನರಿಂದ ಸಾಧ್ಯವಾದಷ್ಟು ದೂರವಾಗಿಯೇ ಇರುತ್ತಿದ್ದ.

"ಅನೇಕಾನೇಕ ವರ್ಷಗಳ ತನಕವೂ ಹೀಗೆಯೇ ನಡೆಯಿತು. ಆತ ಏಕಾಕಿಯಾಗಿ ಬಿಡಾರದ ಸುತ್ತಲೂ ಅಲೆಯುತ್ತಿದ್ದ. ತನಗೆ ಬೇಕೆಂಬುದನ್ನು ಹೊತ್ತು ನಡೆಯುತ್ತಿದ್ದ. ಒಂದು ದಿನ ಒಂದು ಬಿಡಾರದ ಹತ್ತಿರ ಆತ ಸುಳಿದಾಡುತ್ತಿದ್ದಾಗ ಜನಗಳೆಲ್ಲ ಒಟ್ಟಾಗಿ ಆತನನ್ನು ಹಿಡಿಯಲು ಓಡಿ ಬಂದರು. ಆತ ಮಾತ್ರ ಓಡಲಿಲ್ಲ. ಜನರಿಂದ ತನ್ನನ್ನು ರಕ್ಷಿಸಿಕೊಳ್ಳಲೂ ಯತ್ನಿಸಲಿಲ್ಲ. ನಿಂತಲ್ಲಿಯೇ ನಿಂತಿದ್ದ. ಒಬ್ಬನಿಗೆ ಅದರ ಗುಟ್ಟು ಅರ್ಥವಾಯಿತು. ಆತ ಕೂಗಿದ :

'ಅವನನ್ನು ಮುಟ್ಟಬೇಡಿ ! ಆತ ಸಾಯಲು ಹವಣಿಸುತ್ತಿದ್ದಾನೆ !'

"ಎಲ್ಲರೂ ಸುಮ್ಮನೆ ನಿಂತರು. ತಮಗೆ ಘೋರ ಅತ್ಯಾಚಾರ ಮಾಡಿದವನನ್ನು ಕೊಂದು ಅವನಿಗೆ ಹಗುರ ಮಾಡುವ ಇಚ್ಛೆಯಾಗಲಿಲ್ಲ ಅವರಿಗೆ. ಜನ ಅಲ್ಲಿಯೇ ನಿಂತು ಅವನನ್ನು ಗೇಲಿಮಾಡತೊಡಗಿದರು. ಆತ ಇವರ ಪರಿಹಾಸದಿಂದ ಕೆರಳಿ, ಉದ್ವೇಗದಿಂದ ನಡುಗುತ್ತ, ತನ್ನ ಎದೆಯೊಳಗೆ ಕೈ ಹಾಕಿ ಏನನ್ನೋ ಹುಡುಕುತ್ತಿದ್ದ. ಮತ್ತೊಂದು ಕ್ಷಣದಲ್ಲಿ ನೆಲಕ್ಕೆ ಬಗ್ಗಿ ಒಂದು ಕಲ್ಲನ್ನು ತೆಗೆದುಕೊಂಡು ನಿಂತಿದ್ದ ಜನಗಳ ಕಡೆಗೆ ಧಾವಿಸಿದ. ಅವರು ನರಿದು ಹೊಡೆತವನ್ನು ತಪ್ಪಿಸಿಕೊಂಡರು. ತಿರುಗಿ ಅವನನ್ನು ಹೊಡೆಯಲೂ ಇಲ್ಲ. ಆ ತರುಣ ಹತಾಶನಾಗಿ ಅರಚುತ್ತ ನೆಲಕ್ಕುರುಳಿದ. ಜನ ತಟಸ್ಥರಾಗಿ ಅವನನ್ನೇ ನೋಡುತ್ತ ಬದಿಯಲ್ಲಿ ನಿಂತರು. ಆ ಗಲಭೆಯಲ್ಲಿ ಯಾರದೋ ಒಂದು ಚೂರಿ ನೆಲದ ಮೇಲೆ ಬಿದ್ದಿತ್ತು. ನೆಲದಲ್ಲಿ ಉರುಳುತ್ತಿದ್ದ ತರುಣ ಅದನ್ನು ಕಂಡು ಮೇಲಕ್ಕೆದ್ದ. ಫಕ್ಕನೆ ಆ ಚೂರಿಯನ್ನು ತೆಗೆದುಕೊಂಡು ತನ್ನ ಎದೆಗೆ ಬಲವಾಗಿ ನಾಟಿಸಿಕೊಂಡ. ಆದರೆ ಅದು ಕಲ್ಲಿನ ಮೇಲೆ ಹೊಡೆದಂತೆ ಶಬ್ದವಾಯಿತು. ಆತನ ಎದೆಗೆ ನಾಟಲೇ ಇಲ್ಲ. ಆತ ಮತ್ತೆ ಹತಾಶನಾಗಿ ನೆಲಕ್ಕುರುಳಿದ. ತನ್ನ ತಲೆಯನ್ನು ಎತ್ತಿ ನೆಲಕ್ಕೆ ಕುಕ್ಕಿದ. ನೆಲದ ಮೇಲೆಯೇ ಕಚ್ಚು ಬಿದ್ದಿತಲ್ಲದೆ ಅವನ ತಲೆಗೆ ಏನೂ ಆಗಲಿಲ್ಲ.

'ಆತ ಸಾಯಲಾರ !'—ಜನ ಸಂತೋಷದಿಂದ ಕೂಗಿದರು.

"ಆತನನ್ನು ಅಲ್ಲಿಯೇ ಬಿಟ್ಟು ಜನ ನಡೆದರು. ಆತ ನೆಲದ ಮೇಲೆ ಅಂಗಾತವಾಗಿ ಉರುಳಿದ. ಮೇಲೆ ಬಾನಿನ ಎತ್ತರದಲ್ಲಿ ಸ್ವಚ್ಛಂದವಾಗಿ ಹಾರಾಡುತ್ತಿದ್ದ ಹದ್ದುಗಳು ಸಣ್ಣ ಚುಕ್ಕಿಯಂತೆ ತೋರುತ್ತಿದ್ದವು. ಅವುಗಳ ಕಣ್ಣಿನಲ್ಲಿ ಪ್ರಪಂಚಕ್ಕೆಲ್ಲ ಸಾಲುವಷ್ಟು ವಿಷ ಉಕ್ಕುತ್ತಿತ್ತು...........

"ಆ ಕಾಲದಿಂದ ಈ ತನಕವೂ—ಈ ಸಹಸ್ರ ಸಹಸ್ರ ವರ್ಷಗಳೂ ಆತ ಏಕಾಕಿಯಾಗಿ ಸ್ವತಂತ್ರನಾಗಿ ಸಾವಿಗಾಗಿ ಹಂಬಲಿಸಿ ಮೊರೆಯಿಡುತ್ತ ಅಲೆಯುತ್ತಿದ್ದಾನೆ .ಸದಾಕಾಲವೂ ನೆಲವನ್ನು ಅಲೆಯುತ್ತ, ಅಲೆಯುತ್ತಲೇ ಇರುತ್ತಾನೆ........ನೋಡು, ಕಾಣುತ್ತಿದೆಯೆ, ಅಲ್ಲಿ ?........ಈಗಲೇ ಆತ ಕೇವಲ ನೆರಳಾಗಿಬಿಟ್ಟಿದ್ದಾನೆ. ಇನ್ನು ಎಂದೆಂದಿಗೆ ಕೂಡ, ಅನಂತಕಾಲವೂ ಆತ ಹೀಗೆಯೇ ನೆರಳಾಗಿಯೇ ಇರುತ್ತಾನೆ, ಉಳಿದ ಜನಗಳ ಮಾತು ಕೃತಿ—ಒಂದೂ ಆತನಿಗೆ ಅರ್ಥವಾಗದು. ಏನನ್ನೋ ಹುಡುಕುತ್ತ ಅಲೆಯುತ್ತಲೇ ಇರುತ್ತಾನೆ. ಅವನಿಗೆ ಬದುಕು ತಿಳಿಯದು. ಸಾವು ಕೂಡ ಒಮ್ಮೆ ಮೃದು ನಕ್ಕು ಆತನನ್ನು ಅಪ್ಪಿಕೊಳ್ಳದು. ಮನುಷ್ಯಕುಲದಲ್ಲಿ ಆತನಿಗೆ ಸ್ಥಳವೇ ಇಲ್ಲವಾಗಿದೆ........

"ಮನುಷ್ಯನ ಗರ್ವಕ್ಕೆ ಹೇಗೆ ಶಿಕ್ಷೆ ದೊರಕಿತು, ನೋಡಿದೆಯಾ ?"

ಮುದುಕಿ ಒಮ್ಮೆ ದೀರ್ಘವಾಗಿ ನಿಟ್ಟುಸಿರು ಬಿಟ್ಟು ಮೌನ ತಾಳಿದಳು. ಆಕೆಯ ತಲೆ ಕೆಳಮುಖವಾಗಿ ಜೋಲುತ್ತಿತ್ತು. ವಿಚಿತ್ರವಾಗಿ ಕಾಣುತ್ತಿತ್ತು.

ನಾನು ಆಕೆಯ ಕಡೆ ತಿರುಗಿದೆ. ಆಕೆಗೆ ಆಗಲೇ ನಿದ್ದೆ ಬರುತ್ತಿದೆಯೆಂದು ಊಹಿಸಿದೆ. ಆಕೆಯ ಬಗ್ಗೆ ನನ್ನಲ್ಲಿ ಅದೇಕೊ ಪಶ್ಚಾತ್ತಾಪ ಹುಟ್ಟುತ್ತಿತ್ತು. ಆಕೆ ಕಥೆಯನ್ನು ಹೇಗೆ ಮುಗಿಸಿದ್ದಳು, ಉತ್ಕರ್ಷ ಸನ್ನಿವೇಶದಲ್ಲಿ .....ಎಚ್ಚರಿಕೆ ಸೂಚಿಸುವ ವಿಚಿತ್ರ ಧ್ವನಿಯಲ್ಲಿ !....ಆದರೂ ಅದರಲ್ಲಿ ಏನೋ ರಹಸ್ಯವಿರುವಂತೆ ತೋರುತ್ತಿತ್ತು......... ಆಕೆಯ ಧ್ವನಿಯಲ್ಲಿ ದಾಸ್ಯದ ಸೋಂಕು ಸುಳಿದ ಹಾಗೆ ಭಾಸವಾಗುತ್ತಿತ್ತು.

ಸಮುದ್ರ ತೀರದಲ್ಲಿ ವಿಹರಿಸುತ್ತಿದ್ದ ಜನ ಆ ವೇಳೆಗೆ ಹಾಡಲು ತೊಡಗಿದ್ದರು.... ಅದೊಂದು ವಿಲಕ್ಷಣ ರಾಗದಲ್ಲಿ ಹಾಡುತ್ತಿದ್ದರು........ಮೊದಲು ಮಂದ್ರಸ್ವರದಲ್ಲಿ ಗಾಯನ ಮೊದಲಾಯಿತು. ಆ ದನಿ ಒಂದೆರಡು ಚರಣ ಹಾಡಿ ಮುಗಿಸುವಷ್ಟರಲ್ಲಿ ಇನ್ನೊಂದು ದನಿ ಕೇಳಿಸುತ್ತಿತ್ತು.......ಅದು ಮುಂದುವರಿಸುತ್ತಿದಂತೆ ಮತ್ತೆ ಮೊದಲ ದನಿ ಕೊರಳಗೂಡಿಸುತ್ತಿತ್ತು....ಮತ್ತೆ ಮೂರನೆಯ ದನಿ ; ಮತ್ತೆ ನಾಲ್ಕನೆಯ ದನಿ ; ಮತ್ತೆ ಐದನೆಯ ದನಿ........ಮತ್ತೆ ಮತ್ತೆ ಆರಂಭವಾಗುತ್ತಿತ್ತು ; ಮತ್ತೆ ಮತ್ತೆ ಮೊದಲಿನ ದನಿಗಳು ಮರುಕೊಳಿಸುತ್ತಿದ್ದವು.......ಸ್ವಲ್ಪ ಹೊತ್ತಿನಲ್ಲಿ ಗಂಡುಗೊರಲುಗಳೆಲ್ಲವೂ ಕೂಡಿ ಏಕಕಂಠದಲ್ಲಿ ಹಾಡು ಮತ್ತೆ ಹೊಸದಾಗಿ ಆರಂಭವಾಯಿತು........

ಹೆಣ್ಣು ದನಿಗಳು ಆರಂಭವಾದವು. ಮೊದಲು ಒಂದು ಸ್ವರ, ಆಮೇಲೆ ಇನ್ನೊಂದು, ಮತ್ತೊಂದು....ಕಾಮನ ಬಿಲ್ಲಿನ ಬಣ್ಣವನ್ನು ಬೆಳ್ಳಿ ಪರ್ವತದಿಂದ ಇಳಿದು ಬರುತ್ತಿರುವ ಅಖಂಡ ನೀರ್ಝರಿಣಿಯಂತೆ, ನೀರೊಳಗಿನ ಬಂಡೆ ಬಂಡೆಗಳ ಮೇಲೆ

ಉರುಳುತ್ತ ಕಂಪ್ಪಳಿಸುತ್ತ ಗುಳುಗುಳಿಸುತ್ತ ಕುಣಿದು ಬರುವ ಹುಚ್ಚು ಹಳ್ಳದಂತೆ ಹೆಣ್ಣುಗಳ ಮೇಳಗೀತೆ ಆರಂಭವಾಯಿತು. ಅಷ್ಟರಲ್ಲಿಯೇ ಮತ್ತೆ ಗಂಡು ಧ್ವನಿಗಳು ಮೊದಲಾದವು, ಕೆಳಗಿನಿಂದ ಮೇಲೇರಿ ಹೆಣ್ಣುದನಿಗಳನ್ನು ಕೂಡಲು ಸಾಗುತ್ತಿರುವುವೋ ಎನ್ನುವಂತೆ......ಹೆಣ್ಣುಗಳ ಒಕ್ಕೊರಲ ಹಾಡು ಒಮ್ಮೆ ಗಂಡುದನಿಯಲ್ಲಿ ಮುಳುಗಿ ಹೋದಂತೆ, ಮತ್ತೆ ಕ್ಷಣದಲ್ಲಿ ಅದರಿಂದ ಬೇರೆಯಾಗಿ ಅದನ್ನೇ ಮುಳುಗಿಸಿ ಮೇಲೆದ್ದು ಜಯಭೇರಿ ಹೊಡೆದಂತೆ ಸ್ಪಷ್ಟವಾಗಿ ಶುದ್ಧವಾಗಿ ಕೇಳಿಸತೊಡಗಿತು........ಮತ್ತೆ ಮತ್ತೆ ಅದೇ ಮೇಳಗೀತಗಳು......ಒಂದಾದ ಅನಂತರ ಇನ್ನೊಂದು......

ಈ ಮಿಶ್ರಧ್ವನಿಗಳ ಮಧುರ ಮೇಳದಲ್ಲಿ ಸಮುದ್ರದ ಅಬ್ಬರ ಕೇಳಿಸದಾಯಿತು.

# ೨ ಬದುಕಿನ ಹಾಡು–ಪಾಡು

"ಅಂಥ ಹಾಡಿಕೆ ಹಿಂದೆಂದಾದರೂ ಕೇಳಿದ್ದೀಯೇನು ?" ಇಸರ್ಜಿಲ್ ನನ್ನನ್ನು ಕೇಳಿದಳು, ತನ್ನ ತಲೆ ಎತ್ತಿ ಬೊಚ್ಚುಬಾಯಿ ತೋರಿಸಿ ನಗುತ್ತ.

"ಇಲ್ಲ, ನಾನು ಕೇಳಿದ್ದಿಲ್ಲ. ಎಲ್ಲೂ ಕೇಳಿಲ್ಲ."

"ಅಷ್ಟೇ ಅಲ್ಲ, ನೀನು ಎಲ್ಲೂ ಕೇಳಲಾರೆ ಕೂಡ. ಹಾಡುವುದು ನಮಗೆ ಖುಶಿ. ಒಳ್ಳೆ ಚೆಲುವಿನ ಜನಾಂಗದ ಜನ ಮಾತ್ರ ಚೆನ್ನಾಗಿ ಹಾಡಬಲ್ಲರು, ಬದುಕಿನ ಉಲ್ಲಾಸ ದಿಂದ ಉಕ್ಕುತ್ತಿರುವಂಥ ಜನ. ನೋಡು, ಅಲ್ಲಿ ಹಾಡುತ್ತಿದ್ದಾರಲ್ಲ ಅವರು ದಿನದ ದುಡಿಮೆಯಿಂದ ದಣಿದಿಲ್ಲ ಎಂದು ಭಾವಿಸುತ್ತೀಯೇನು ? ಹೊತ್ತು ಮೂಡಿದಾಗಿಂದ ಮುಳುಗುವ ತನಕವೂ ಅವರು ದುಡಿದಿದ್ದಾರೆ ; ಈಗ ತಿಂಗಳು ಮೂಡಿತಲ್ಲ, ಹಾಡಲು ತೊಡಗಿದ್ದಾರೆ. ಅದೇ ಬದುಕಿನಲ್ಲಿ ಖುಶಿ ಇಲ್ಲದಂಥ ಜನವಾಗಿದ್ದರೆ ಹೋಗಿ ಮಲಗಿ ಕೊಳ್ಳುತ್ತಿದ್ದರು. ಆದರೆ ಈ ಜನಕ್ಕೆ ಬದುಕು ಮಧುರ, ಅದಕ್ಕೇ ಅವರಿಗೆ ಹಾಡ ಬೇಕು, ಕುಣಿಯಬೇಕು.

"ಆದರೆ ಅವರ ಆರೋಗ್ಯ......" ನಾನು ಪ್ರಾರಂಭ ಮಾಡಿದೆ.

"ಆರೋಗ್ಯ ! ಪ್ರತಿಯೊಬ್ಬನಿಗೂ ಅವನ ಬದುಕಿನ ಪರ್ಯಂತ ಬೇಕಾಗುವಷ್ಟು ಆರೋಗ್ಯ ಇದ್ದೇ ಇರುತ್ತದೆ. ಆರೋಗ್ಯದ ಮಾತು ಹೇಳುತ್ತೀಯಲ್ಲ. ನಿನ್ನಲ್ಲಿ ಹಣ ವಿದ್ದರೆ ನೀನು ಅದನ್ನು ಖರ್ಚು ಮಾಡುವುದಿಲ್ಲವೆ ? ಆರೋಗ್ಯ ಹಣದ ಹಾಗೇ, ಬಂಗಾರ. ನನ್ನ ಪ್ರಾಯಕಾಲ ಹೇಗೆ ಸಂದಿತು ಗೊತ್ತಾ ? ಬೆಳಿಗ್ಗೆ ಹೊತ್ತು ಮೂಡಿದಾಗಿಂದ ಸಂಜೆ ಹೊತ್ತು ಹೋಗುವ ತನಕ ನಾನು ದುಪ್ಪಟಿ ನೇಯುತ್ತಿದ್ದೆ, ಮಧ್ಯೆ ನನ್ನ ಬೆನ್ನು ಬಗ್ಗಿಸಿದ್ದು ಕೂಡಾ ಇಲ್ಲ. ಸೂರ್ಯನ ಕಿರಣ ಇದ್ದ ಹಾಗಿದ್ದೆ, ಜೀವಂತಿಕೆ ತುಂಬಿಕೊಂಡು. ಕೆಲಸದಲ್ಲಿ ಇಡೀ ದಿನ ಹಾಗೆ ಅಲುಗದೆ ಅಷ್ಟು ಹೊತ್ತು ಕೂಡಬೇಕಾಗಿತ್ತು. ಕೆಲವು ಸಲ ಅಷ್ಟು ಹೊತ್ತು ಹಾಗೇ ಕೂತು ಮೂಳೆಗಳು ನೋಯು

ತೊಡಗುತ್ತಿದ್ದವು. ಆದರೆ ಸಂಜೆಯಾಯಿತೆಂದರೆ ಸಾಕು, ಓಡುತ್ತಿದ್ದೆ ನನ್ನ ಮುಂದಿನವ ನನ್ನು ಅಪ್ಪಿಕೊಳ್ಳುವುದಕ್ಕೆ. ಅವನನ್ನು ಪ್ರೇಮಿಸುತ್ತಿದ್ದ ಆ ಮೂರು ತಿಂಗಳ ಕಾಲವೂ ದಿನಾ ಹೀಗೇ ಓಡುತ್ತಿದ್ದೆ ಸಂಜೆಗೆ. ಇಡೀ ರಾತ್ರಿ ಅವನ ಜೊತೆಗೇ ಕಳೆಯುತ್ತಿದ್ದೆ. ಆದರೂ ನಾನು ಎಷ್ಟು ದೀರ್ಘಕಾಲ ಬದುಕಿದ್ದೇನೆ, ನೋಡು. ನನ್ನ ನರಗಳ ತುಂಬ ಸಾಕಷ್ಟು ರಕ್ತವಿತ್ತೆಂದು ಕಾಣುತ್ತದೆ. ಎಷ್ಟು ಸಲ ಮತ್ತೆ ಮತ್ತೆ ನಾನು ಪ್ರೇಮಕ್ಕೆ ಸಿಕ್ಕಿಕೊಂಡೆ! ಎಷ್ಟು ಮುತ್ತು ಕೊಟ್ಟಿದ್ದೇನೋ, ಎಷ್ಟು ಕೊಂಡಿ ದ್ದೇನೋ!"

ನಾನು ಅವಳ ಮುಖವನ್ನೇ ದಿಟ್ಟಿಸಿ ನೋಡಿದೆ. ಆಕೆಯ ಕಪ್ಪು ಕಣ್ಣುಗಳು ಇನ್ನೂ ಮಂಕಾಗಿಯೇ ಇದ್ದವು. ಪ್ರಾಯಃ ಅವಳ ಆ ನೆನಪುಗಳು ಕೂಡ ಆ ಕಣ್ಣುಗಳ ಹೊಳಪನ್ನು ಬೆಳಗಲು ಶಕ್ತವಾಗಿರಲಿಲ್ಲ. ಆಕೆಯ ಬಿರಿದ ಒಣಕು ತುಟಿಗಳ ಮೇಲೆ, ಕೂದಲು ಕಾಣಿಸುತ್ತಿದ್ದ ಚೂಪು ಗಲ್ಲದ ಮೇಲೆ, ಹದ್ದಿನ ಕೊಕ್ಕಿನ ಹಾಗೆ ಬಾಗಿದ ಆಕೆಯ ಸುಕ್ಕುಗಟ್ಟಿದ ಮೂಗಿನ ಮೇಲೆ—ತಿಂಗಳ ಬೆಳಕು ಹರಿದು ಚೆಲ್ಲಿಕೊಂಡಿತ್ತು. ಹಿಂದೆ ಆಕೆಯ ತುಂಬು ಕೆನ್ನೆಗಳಿದ್ದಲ್ಲಿ ಈಗ ಗುದ್ದುಗಳಿದ್ದವು; ತಲೆ ಸುತ್ತ ಶಿರೋಪಿ ಕಟ್ಟಿದ್ದ ಕೆಂಪು ಚಿಂದಿಯನ್ನು ತಪ್ಪಿಸಿ, ನಾಕೆಂಟು ನೆರೆತ ಕೂದಲುಗಳು ಒಂದು ಕಡೆ ಎದ್ದು ಕಾಣುತ್ತಿದ್ದವು. ಅವಳ ಮುಖ ಕುತ್ತಿಗೆ ಕೈಗಳು ಇವುಗಳ ಮೇಲೆಲ್ಲ ಸುಕ್ಕುಗಳ ಬಲೆ ಹರಡಿಕೊಂಡಿತ್ತು; ಆಕೆ ಕೈ ಎತ್ತಿದರೆ ಮೈ ಅಲುಗಿಸಿದರೆ ಒಂದೊಂದು ಸಲವೂ, ಎಲ್ಲಿ ಆಕೆಯ ಆ ಪೊರೆಯಂಥ ಚರ್ಮ ಒಡೆದು ಹೋಗುತ್ತದೆಯೋ, ಅದು ಸುಲಿದು ನನ್ನ ಬದಿಗೆ ಎರಡು ಕಪ್ಪು ಮಂಕು ಕಣ್ಣುಗಳು ಹೂತಿರುವ ಅಸ್ಥಿಪಂಜರವಷ್ಟೇ ಉಳಿದು ಬಿಡುತ್ತದೆಯೋ—ಎನ್ನಿಸುತ್ತಿತ್ತು.

ಮಾತೊಮ್ಮೆ ಆಕೆ ತನ್ನ ಒಡಕು ದನಿಯಲ್ಲಿ ಮಾತಾಡಲು ಪ್ರಾರಂಭ ಮಾಡಿ ದಳು:

"ಬಿರ್ಲತ್ ನದಿಯ ದಡದಲ್ಲಿ ಫಾಮಿಯ ಸಮೀಪ ಆಗ ನಾನು ನನ್ನ ತಾಯಿಯ ಜೊತೆಗೆ ಇರುತ್ತಿದ್ದೆ. ಅವನು ಮೊದಲು ಆ ನಮ್ಮ ಹೊಲಕ್ಕೆ ಬಂದಾಗ ನನಗೆ ಹದಿನೈದು ವರ್ಷ. ಅವನು ಒಳ್ಳೇ ಕಪ್ಪಾಗಿ ಎತ್ತರವಾಗಿದ್ದ, ಮಾಟವಾಗಿದ್ದ. ಒಳ್ಳೇ ಮಜೇದಾರಿಯಾಗಿ ಕಾಣುತ್ತಿದ್ದ. ನಮ್ಮ ಕಿಟಕಿಯ ಎದುರಲ್ಲೇ ದೋಣಿ ನಿಲ್ಲಿಸಿ ಅವನು ಗಂಟೆ ಹೊಡೆದ ಹಾಗೆ ಕೂಗಿದ್ದ: 'ಹೋಯ್, ನನಗಿಷ್ಟು ಸೆರೆ ಮತ್ತು ತಿನ್ನುವುದಕ್ಕೆ ಏನಾದರೂ ಸಿಕ್ಕಬಹುದೇನು ಇಲ್ಲಿ?' ನಾನು ಕಿಟಕಿಯಿಂದ ಹೊರಗೆ ನೋಡಿದೆ; ಒಂದು ಹೆಮ್ಮರದ ಕೊಂಬೆಗಳ ನಡುವಿಂದ ಹೊಳೆ ಕಾಣುತ್ತಿತ್ತು, ತಿಂಗಳ ಬೆಳಕಲ್ಲಿ ಇಡೀ ನೀಲಿ ನೀಲಿಯಾಗಿ. ಅವನು ಅಲ್ಲೇ ನಿತ್ತಿದ್ದ, ಒಂದು ಕಾಲು ದೋಣಿಯುಲ್ಲೂ ಒಂದು ಕಾಲು ದಡದ ಮೇಲೂ ಇಟ್ಟುಕೊಂಡು. ಬಿಳಿ ಜುಬ್ಬ ತೊಟ್ಟು ಅದಕ್ಕೊಂದು ಅಗಲವಾದ ನಡುಪಟ್ಟಿ ಸುತ್ತಿದ್ದ. ಹಾಗೇ, ದೋಣಿಯನ್ನು ತೂಗುತ್ತ ಹಾಡಿಕೊಳ್ಳುತ್ತಿದ್ದ. ಒಂದು

ಸಲ ಹೀಗೆ ತಿರುಗಿ ನಾನು ಕಣ್ಣಿಗೆ ಬಿದ್ದಾಗ ತನ್ನಷ್ಟಕ್ಕೇ ಉದ್ಗರಿಸಿದ : 'ಓ, ಇಲ್ಲಿ ಎಂಥ ಚಂದ ಹುಡುಗಿ ಇದ್ದಾಳೆ, ನನಗೆ ಗೊತ್ತೇ ಇರಲಿಲ್ಲವಲ್ಲ !'—ಪ್ರಪಂಚದಲ್ಲಿ ಇನ್ನು ಬೇರೆ ಕಡೆ ಇರುವ ಎಲ್ಲಾ ಚಂದದ ಹುಡುಗಿಯರೂ ತನಗೆ ಗೊತ್ತು ಎನ್ನುವ ಹಾಗೆ. ನಾನು ಅವನಿಗಿಷ್ಟು ಸೆರೆ ಕೊಟ್ಟೆ, ಮಾಂಸ ಕೊಟ್ಟೆ. ಮತ್ತೆ ನಾಲ್ಕು ದಿನ ಬಿಟ್ಟು ನನ್ನನ್ನೇ ಕೊಟ್ಟುಕೊಂಡೆ. ಪ್ರತಿ ರಾತ್ರಿಯೂ ನಾನು ಅವನು ಕೂಡಿ ದೋಣಿಯಲ್ಲಿ ಹೋಗುತ್ತಿದ್ದೆವು. ಪ್ರತಿ ರಾತ್ರಿ ಅವನು ಬರುತ್ತಿದ್ದ, ಮೆಲ್ಲಗೆ ಅಳಿಲಿನ ಹಾಗೆ ಸಿಳ್ಳು ಹಾಕುತ್ತಿದ್ದ. ನಾನು ಕಿಟಕಿಯಿಂದ ಹಾಗೇ ಧುಮುಕುತ್ತಿದ್ದೆ ಹೊರಗೆ, ದಡದ ಮೇಲಿದ್ದ ಮೀನಿನ ಹಾಗೆ. ಅಲ್ಲಿಂದ ನಾವು ಹೊರಟುಬಿಡುತ್ತಿದ್ದೆವು. ಅವನು ಆಚೆ ಊರಿನಿಂದ ಬಂದ ಮೀನುಗಾರರ ಕುಲದವನು. ಇದೆಲ್ಲ ನಮ್ಮ ತಾಯಿಗೆ ತಿಳಿದು ಅವಳು ನನ್ನನ್ನು ಹಿಡಿದು ಹೊಡೆದಾಗ ಅವನು—ಬಾ ನನ್ನ ಜೊತೆಗೆ. ಇಲ್ಲಿಂದ ಓಡಿಹೋಗೋಣ, ಈ ನದಿಯ ತುತ್ತತುದಿಗೆ ಒಂದು ಊರಿದೆ, ಅಲ್ಲಿಗೆ ಹೋಗಿಬಿಡೋಣ ಎಂದು ಒತ್ತಾಯ ಪಡಿಸಲು ತೊಡಗಿದ. ಆದರೆ ಅಷ್ಟರಲ್ಲಿ, ನನಗೆ ಅವನ ಸಹವಾಸವೇ ಬೇಸರ ವಾಗಲು ತೊಡಗಿತ್ತು ; ಹಾಡುವುದು, ಮುದ್ದುಮಾಡುವುದು ಇಷ್ಟು ಬಿಟ್ಟರೆ ಅವನಿಗೆ ಮತ್ತೇನೂ ಗೊತ್ತಿರಲಿಲ್ಲ. ನನಗೆ ಅದು ಬೇಜಾರಾಗಿಬಿಟ್ಟಿತು. ಮತ್ತೇ ಅದೇ ಹೊತ್ತಿಗೆ ಹತ್ಸಲ್ ಜನಾಂಗದ ಅಲೆಮಾರಿ ಜನರ ಒಂದು ಗುಂಪು ಈ ಕಡೆ ವಲಸೆ ಬಂದಿತ್ತು. ಆ ಜನ ಇಲ್ಲಿನ ಎಷ್ಟೋ ಹುಡುಗಿಯರನ್ನು ಪ್ರೀತಿಸಿ ಕೈಗೆ ಮಾಡಿಕೊಂಡರು. ಆ ಹುಡುಗಿಯರಿಗೂ ಅದು ಒಳ್ಳೆಯ ಖುಶಿಯ ಕಾಲವಾಗಿತ್ತು. ಒಂದೊಂದು ಸಲ ಅವರಲ್ಲಿ ಯಾರೋ ಒಬ್ಬ ಹುಡುಗ ಇದ್ದಕ್ಕಿದ್ದ ಹಾಗೆ ಅದೃಶ್ಯನಾಗಿಬಿಡುತ್ತಿದ್ದ. ಅವನ ಪ್ರೇಯಸಿ ಕೊರಗಿ ಕೊರಗಿ ಕೃಶವಾಗಿಬಿಡುತ್ತಿದ್ದಳು, ಎಲ್ಲೋ ಅವನನ್ನು ಸೆರೆಮನೆಗೆ ಹಾಕಿಬಿಟ್ಟಿರಬೇಕು ಇಲ್ಲವೆ ಎಲ್ಲೋ ಮಾರಾಮಾರಿಯಲ್ಲಿ ಅವನು ಸತ್ತೇ ಹೋಗಿರಬೇಕು ಎಂಬ ನಿರ್ಧಾರದಿಂದ. ಆದರೆ ಅಷ್ಟರಲ್ಲಿ ಇದ್ದಕ್ಕಿದ್ದ ಹಾಗೆ ಒಂದು ದಿನ ಅವನು ಪ್ರತ್ಯಕ್ಷನಾಗಿಬಿಡುತ್ತಿದ್ದ, ಎರಡು ಮೂರು ಜನ ಯಾರೋ ಗೆಣೆಕಾರರನ್ನು ಕೂಡಿಕೊಂಡು, ಆಕಾಶದಿಂದ ಹರಿದು ಬಿದ್ದವನ ಹಾಗೆ. ಬರುವಾಗ ಲೆಕ್ಕವಿಲ್ಲದಷ್ಟು ಐಶ್ವರ್ಯ ಹೊತ್ತುಬರುವುದು ಸಾಮಾನ್ಯವಾಗಿತ್ತು. ಅವರಿಗೆ ಐಶ್ವರ್ಯ ಕೂಡುವುದೂ ಬಹಳ ಸುಲಭದ್ದಾಗಿಬಿಟ್ಟಿತ್ತು. ಬಂದ ಮೇಲೆ ತನ್ನ ಪ್ರೀತಿಯವಳ ಜೊತೆ ಔತಣ ಹೂಡುತ್ತಿದ್ದ. ಬಂದ ಗೆಣೆಯರಿಗೆಲ್ಲ ಅವಳ ಸುದ್ದಿ ಹೇಳಿ ಜಂಬ ಕೊಚ್ಚಿಕೊಳ್ಳುತ್ತಿದ್ದ. ಆ ಹುಡುಗಿಗೆ ಖುಶಿಯೋ ಖುಶಿ. ಅಂಥ ಒಬ್ಬನನ್ನು ಗಂಟುಹಾಕಿಕೊಂಡಿದ್ದ ನಮ್ಮ ಒಬ್ಬ ಹುಡುಗಿಗೆ ನಾನು ನನಗೆ ಅವರನ್ನು ಗುರುಮಾಡಿಸಿಕೊಡು ಎಂದೆ. ಆ ಹುಡುಗಿಯ ಹೆಸರು—ಅದೇನೋ ಈಗ ಮರೆತು ಹೋಗಿದೆ ಬಿಡು. ಯಾಕೋ ಈಗೀಗ ನನಗೆ ನೆನಪೇ ಕೈಕೊಡುತ್ತದೆ. ಆದರೆ, ಅದು ನಡೆದದ್ದು ಬಹಳ ಹಿಂದೆ. ಯಾರಿಗಾದರೂ ನೆನಪುಳಿಯುವುದು ಕಷ್ಟವೇ. ಈ ಹುಡುಗಿಯ ಮೂಲಕ ನನಗೆ ಆ

ಹತ್ಸಲ್ ಜನರಲ್ಲಿ ಒಬ್ಬನ ಭೇಟ್ಟಿಯಾಯಿತು. ಅವನು ಒಳ್ಳೇ ಚೆಲುವನಾಗಿದ್ದ. ಕೆಂಪು ಕೂದಲು, ಕೆಂಪು ಕುಡಿಗಡ್ಡ—ಉರಿ, ಉರಿ ಇದ್ದ ಹಾಗಿತ್ತು! ಒಂದೊಂದು ಸಲ ತುಂಬ ಮೃದುವಾಗಿರುತ್ತಿದ್ದ, ಮತ್ತೆ ಒಮ್ಮೊಮ್ಮೆ ಮೊರೆಯುವ ಕಾಡು ಪಶುವಿನ ಹಾಗೆ ಸೆಣಸುತ್ತಿದ್ದ. ಒಂದು ಸಲ ಅವನು ನನ್ನ ಮುಖಕ್ಕೇ ಎತ್ತಿ ಬಾರಿಸಿಬಿಟ್ಟ. ನಾನೂ ಸುಮ್ಮನಿರಲಿಲ್ಲ, ಬೆಕ್ಕಿನ ಹಾಗೆ ಅವನ ಎದೆಗೆ ಹಾರಿ ಕೆನ್ನೆಯಲ್ಲಿ ಹಲ್ಲು ನಾಟಿಸಿ ಕಚ್ಚಿಬಿಟ್ಟೆ. ಆಗಿಂದ ಅವನ ಕೆನ್ನೆಯಲ್ಲಿ ಒಂದು ಕಲೆ ಉಳಿದುಕೊಂಡಿತು. ಆಮೇಲೆ ಆ ಕಲೆಗೇ ನಾನು ಮುತ್ತುಕೊಡಬೇಕು ಎಂದು ಆಸೆಪಡುತ್ತಿದ್ದ."

"ಆದರೆ ಆ ಮೀನುಗಾರನ ಕತೆ ಏನಾಯಿತು?" ನಾನು ಪ್ರಶ್ನೆ ಮಾಡಿದೆ.

"ಓ, ಅವನೋ—ಅವನು ಅಲ್ಲೇ ಇದ್ದ. ಕಡೆಗೆ ಆ ಹತ್ಸಲರ ತಂಡವನ್ನೇ ಕೂಡಿಕೊಂಡ. ಮೊದಮೊದಲು ನನ್ನನ್ನು ಬೇಡಿಕೊಳ್ಳುತ್ತಿದ್ದ ತನ್ನ ಹತ್ತಿರ ಬಾ ಎಂದು. ಬರದಿದ್ದರೆ ನಿನ್ನನ್ನು ಹೊಳೆಗೆ ಎತ್ತಿ ಎಸೆದು ಬಿಡುತ್ತೇನೆ ಎಂದು ಹೆದರಿಸಿದ. ನಾನು ಬಗ್ಗದಿದ್ದಾಗ ದಿನ ಕಳೆದ ಹಾಗೆ ತಾನೇ ತಣಿದುಕೊಂಡ. ಆ ಜನರ ಗುಂಪು ಸೇರಿದ ಮೇಲೆ ಅವನು ಮತ್ತೊಬ್ಬ ಗೆಣಕಾತಿಯನ್ನು ಹುಡುಕಿಕೊಂಡ..................ಕೊನೆಗೆ ಅವರಿಬ್ಬರೂ—ನನ್ನ ಆ ಹತ್ಸಲ್ ಗೆಣೆಯ ಮತ್ತು ಈ ಮೀನುಗಾರ—ಇಬ್ಬರೂ ಗಲ್ಲಿಗೇರಿಸಲ್ಪಟ್ಟರು. ದೊಬ್ರುಜದಲ್ಲಿ ಅವರ ನೇಣುಹಾಕುವುದನ್ನು ನೋಡಲಿಕ್ಕೆ ನಾನೂ ಹೋಗಿದ್ದೆ. ಈ ಮೀನುಗಾರರ ಹುಡುಗ ಹೆಣದ ಹಾಗೆ ಬಿಳಚಿಹೋಗಿದ್ದ, ನೇಣಿನ ಹತ್ತಿರ ಹೋಗುವಾಗ ಅಳುತ್ತಿದ್ದ. ಆದರೆ ಆ ಹತ್ಸಲನನ್ನು ನೋಡಬೇಕಿತ್ತು, ಅವನು ಯಾವಾಗಿನಂತೇ ಚುಟ್ಟ ಎಳೆಯುತ್ತ ಸಮಾಧಾನವಾಗಿಯೇ ಇದ್ದ. ಚುಟ್ಟ ಎಳೆಯುತ್ತ, ಜೇಬುಗಳಲ್ಲಿ ಕೈಯಿಟ್ಟುಕೊಂಡು ನೇರ ನಿಶ್ಚಿಂತೆಯಿಂದ ನೇಣಿನ ಕಡೆ ನಡೆದ. ಅವನ ಉದ್ದ ಮೀಸೆಯ ಒಂದು ಕುಡಿ ಭುಜ ತಿಕ್ಕುತ್ತಿತ್ತು, ಇನ್ನೊಂದು ಎದೆಗೆ ತೀಡುತ್ತಿತ್ತು. ಹಾಗೇ ನಾನು ಅವನ ಕಣ್ಣಿಗೆ ಬಿದ್ದೆ. ಕೂಡಲೇ ಬಾಯಲ್ಲಿದ್ದ ಚುಟ್ಟ ಹೊರಕ್ಕೆ ತೆಗೆದು, ನನ್ನ ಕಡೆ ನೋಡಿ, 'ಹೋಯ್, ಹೋಗುತ್ತೇನೆ' ಎಂದು ಕೂಗಿ ಮುಂದೆ ನಡೆದ ನೇಣಿನ ಕಂಬಕ್ಕೆ. ಆ ವರ್ಷ ಇಡೀ ನಾನು ಅವನಿಗಾಗಿ ಅತ್ತು ಅತ್ತು ಸವೆದೆ. ಅವರು ತಮ್ಮ ಮೂಲ ಜಾಗವಾದ ಪರ್ವತ ಪ್ರಾಂತಗಳಿಗೆ ಮರಳುವುದಕ್ಕೆ ತಯಾರು ಮಾಡಿಕೊಳ್ಳುತ್ತಿದ್ದರು, ಆದರೆ ಅಷ್ಟರಲ್ಲಿ ಅವರನ್ನು ಹಿಡಿದುಬಿಟ್ಟರು. ರುಮೇನಿಯಾದವನೊಬ್ಬನ ಮನೆಯಲ್ಲಿ ಅವರಿಗೆ ಒಂದು ಬೀಳ್ಕೊಡುವ ಔತಣ ನಡೆದಿತ್ತು, ಅಲ್ಲೇ ಅವರನ್ನು ಹಿಡಿದುಬಿಟ್ಟಿದ್ದರು. ಕಡೆಗೂ ಸಿಕ್ಕಿದವರು ಈ ಇಬ್ಬರೇ. ಕೆಲವರನ್ನು ಅಲ್ಲೇ ಸ್ಥಳದಲ್ಲೇ ಕೊಂದುಹಾಕಿದ್ದರು. ಮತ್ತುಳಿದವರು ತಪ್ಪಿಸಿಕೊಂಡರು. ಇಷ್ಟೆಲ್ಲಾ ಮಾಡಿದ್ದ ಆ ರುಮೇನಿಯನ್ನನಿಗೂ ತಕ್ಕ ಶಿಕ್ಷೆಯೇ ಆಯಿತು. ಅವನ ಹೊಲ ಗಿರಣಿ ಕಣಜ ಎಲ್ಲವನ್ನೂ ಸುಟ್ಟು ನೆಲಸಮ ಮಾಡಿದರು. ಅವನು ಬರಿಗೈಯಲ್ಲಿ ಮುಂದೆ ತಿರುಪೆ ಬೇಡುವ ಹಾಗಾಯಿತು."

"ನೀನೇ ಮಾಡಿದೆಯೇನೋ..........." ನಾನು ಒಂದು ಊಹೆಯನ್ನು ಮುಂದಿಟ್ಟೆ.

"ಆ ಹತ್ಸಲ್ ಜನಕ್ಕೆ ಅನೇಕ ಜನ ಗೆಣೆಕಾರರಿದ್ದರು, ನಾನೊಬ್ಬಳೇ ಏನಲ್ಲ. ಅವಗ ಗೆಣೆಯರಲ್ಲೆಲ್ಲ ಹೆಚ್ಚಿನವರೊಬ್ಬರು, ಆ ಗೆಣೆತನದ ನೆನಪಿಗಾಗಿ, ಈ ಕೆಲಸ ಮಾಡಿದರು ಎನ್ನು."

ಇಷ್ಟು ಹೊತ್ತಿಗೆ ಸಮುದ್ರತೀರದಲ್ಲಿ ಹಾಡುತ್ತಿದ್ದುದು ನಿಂತು ಹೋಗಿತ್ತು. ಅಲೆಗಳ ಗೊಣಗು ಬಿಟ್ಟರೆ ಆ ಮುದುಕಿಯ ಕಥೆಗೆ ಶೃತಿಕೊಡುವ ಮತ್ತಾವ ಸ್ವರವೂ ಇರಲಿಲ್ಲ. ಆದರೆ ಕ್ಷಣವೂ ತೆರಪಿಲ್ಲದೆ ತನ್ನಷ್ಟಕ್ಕೇ ಕುದ್ದುಕೊಳ್ಳುವ ಅಲೆಗಳ ಆ ಗೊಣಗು ಈ ಅವಿಶ್ರಾಂತ ಬದುಕಿನ ಚಿತ್ರಕಥೆಗೆ ತಕ್ಕುದಾಗಿ ಶೃತಿಗೊಡುತ್ತಿತ್ತು. ರಾತ್ರಿ ಶಾಂತವಾಗುತ್ತಿತ್ತು, ಬೆಳುದಿಂಗಳ ಹೊಳಪು ಮತ್ತಷ್ಟು ನೀಲಗೊಳ್ಳುತ್ತಿತ್ತು, ಇರುಳಿನ ಅದೃಶ್ಯ ಪರಿವಾರದ ತಿಳಿಯಂದ ನೂರು ಸದ್ದುಗಳು ಮೆಲುವಾಗುತ್ತಿದ್ದವು. ಗಾಳಿ ಎದ್ದಂತೆ ಹೆಚ್ಚಿ ಹುಯ್ಯಲಿಡುವ ಸಮುದ್ರದ ಮೊರೆತದಲ್ಲಿ ಈ ಸದ್ದುಗಳೆಲ್ಲ ಮುಳುಗಿ ಹೋಗುತ್ತಿದ್ದವು.

"ಆದಾದ ಮೇಲೆ, ಇನ್ನೊಬ್ಬ ಟರ್ಕ್—ಆತನ ಪ್ರೇಮದಲ್ಲಿ ಸಿಕ್ಕಿಕೊಂಡೆ. ಸ್ತ್ರೀಕತರಿಯ ಅವನ ಜನಾನಾದಲ್ಲಿ ಒಬ್ಬಳಾಗಿದ್ದೆ ನಾನು. ಒಂದು ಇಡೀ ವಾರ ಆ ಪರಿವೆಯೇ ಇಲ್ಲದೆ ನಾನು ಅಲ್ಲಿ ಇದ್ದುಬಿಟ್ಟಿದ್ದೆ. ಆದರೆ ಆಮೇಲೆ ಮಾತ್ರ ಅದು ನನಗೆ ರೇಜಿಗೆ ಹುಟ್ಟಿಸಿತು. ಎಲ್ಲಿ ನೋಡಿದರೂ ಹೆಂಗಸರು, ಹೆಂಗಸರು. ಒಂದಲ್ಲ ಎರಡಲ್ಲ ಎಂಟು ಜನರಿದ್ದರು; ಇಡೀ ದಿನ ಅವರು ತಿನ್ನುತ್ತಿದ್ದರು, ಮಲಗುತ್ತಿದ್ದರು, ಕೆಲಸಕ್ಕೆ ಬಾರದ ಹುರುಳಿಲ್ಲದ ಹರಟೆ ಹರಟುತ್ತಿದ್ದರು. ಅಥವಾ ಒಬ್ಬರೊಬ್ಬರಲ್ಲಿ ಜಗಳ ತೊಡಗುತ್ತಿದ್ದರು; ಅಂಥ ಹೊತ್ತಿನಲ್ಲಿ ಗೂಡು ತುಂಬಿ ಕೆಲೆಯುವ ಕೋಳಿಗಳ ಹಾಗೆ ಕಾಣುತ್ತಿದ್ದರು. ಆ ಟರ್ಕ್ ಎಳೆಯುವನಲ್ಲ. ಅವನ ಕೂದಲು ಬೆಳ್ಳಗಾಗಿತ್ತು. ಅವನು ಶ್ರೀಮಂತನಾಗಿದ್ದ, ಮುಖ್ಯಸ್ಥನಾಗಿದ್ದ. ಒಳ್ಳೇ ರಾಜನ ಹಾಗೆ ಮಾತಾಡುತ್ತಿದ್ದ. ಅವನ ಕಣ್ಣುಗಳು ಕಪ್ಪಾಗಿದ್ದವು, ನೇರ ನೋಡುತ್ತಿದ್ದವು—ನೇರ ನಿನ್ನ ಆತ್ಮವನ್ನೇ ಹೊಕ್ಕು ನೋಡುತ್ತಿವೆಯೋ ಎನ್ನಿಸುತ್ತಿತ್ತು. ಅವನು ಹೆಚ್ಚಾಗಿ ಯಾವಾಗಲೂ ಪ್ರಾರ್ಥನೆಯಲ್ಲೇ ಇರುತ್ತಿದ್ದ. ನಾನು ಅವನನ್ನು ಮೊದಲು ನೋಡಿದ್ದು ಬುಖಾರೆಸ್ಟ್‌ನಲ್ಲಿ. ಅಲ್ಲಿ ಪೇಟೆಯಲ್ಲಿ ಅವನು ರಾಜನ ಹಾಗೆ ಗರ್ವದಿಂದ ತಿರುಗಾಡುತ್ತಿದ್ದ, ಭಾರೀ ಕುಳ ಎನ್ನುವುದು ಎದ್ದು ಕಾಣುವ ಹಾಗೆ. ನಾನು ಅವನನ್ನು ನೋಡಿ ಮುಗುಳ್ನಕ್ಕೆ. ಅದೇ ಸಂಜೆ ನನ್ನನ್ನು ಹಿಡಿದರು, ಹಿಡಿದು ಅವನ ಹತ್ತಿರಕ್ಕೆ ಒಯ್ದರು. ಗಂಧ ತಾಳೆ ಮುಂತಾದ ಮರಗಳ ವ್ಯಾಪಾರವೇ ಅವನ ವೃತ್ತಿಯಾಗಿತ್ತು. ಅದೇ ಯಾವುದೋ ವ್ಯಾಪಾರಕ್ಕಾಗಿಯೇ ಅವನು ಬುಖಾರೆಸ್ಟ್‌ಗೆ ಬಂದಿದ್ದ.

"'ನನ್ನ ಜೊತೆ ಬರುತ್ತೀಯಾ?' ಅವನು ಕೇಳಿದ.

'ಓಹೋ ಬರುತ್ತೇನೆ' ಎಂದೆ ನಾನು.

'ಒಳ್ಳೇದು' ಎಂದ ಅವನು.

"ನಾನು ಅವನ ಜೊತೆ ನಡೆದೆ. ಅವನು ತುಂಬಾ ಶ್ರೀಮಂತನಾಗಿದ್ದ. ಅವನಿಗೊಬ್ಬ ಮಗನಿದ್ದ—ಹದಿನಾರು ವರ್ಷ, ಕಪ್ಪು ಕೂದಲು, ತೆಳುವಾಗಿದ್ದ. ಆಮೇಲೆ ನಾನು ಈ ಟರ್ಕನನ್ನು ಬಿಟ್ಟು ಈ ಹುಡುಗನ ಜೊತೆ ಬಲ್ಗೇರಿಯಾಕ್ಕೆ ಓಡಿಹೋದೆ. ಅಲ್ಲಿ ಬಲ್ಗೇರಿಯಾದ ಹೆಂಗಸೊಬ್ಬಳು ನನ್ನ ಎದೆಗೆ ಚೂರಿ ತಿವಿದಳು, ಯಾವುದೋ ಒಬ್ಬ ಗಂಡಸಿನ ಕಾರಣಕ್ಕಾಗಿ. ಆತ ಅವಳ ಗಂಡನೋ ಗೆಣೆಕಾರನೋ, ಸರಿಯಾಗಿ ನೆನಪಿಲ್ಲ.

"ಅದಾದ ಮೇಲೆ ಬಹಳ ದಿನ ಖಾಯಿಲೆ ಬಿದ್ದು ಒಂದು ಸಂನ್ಯಾಸಿನಿಯರ ಮಠದಲ್ಲಿ ಉಳಿದೆ. ಅಲ್ಲಿ ಸಂನ್ಯಾಸಿನಿಯಾಗಿದ್ದ ಪೋಲಂಡಿನ ಒಬ್ಬ ಹುಡುಗಿ ನನ್ನ ಆರೈಕೆ ಮಾಡಿದಳು. ಅವಳ ಅಣ್ಣ, ಅಲ್ಲೇ ಹತ್ತಿರದ ಒಂದು ಮಠದಲ್ಲಿ ಸಂನ್ಯಾಸಿಯಾಗಿದ್ದವ, ಆಕೆಯನ್ನು ನೋಡುವುದಕ್ಕೆ ಆಗಾಗ ಅಲ್ಲಿಗೆ ಬರುತ್ತಿದ್ದ. ಅವನು ಅಲ್ಲಿ ಬಂದಾಗೆಲ್ಲ ಹುಳುವಿನ ಹಾಗೆ ನನ್ನನ್ನು ಸುತ್ತಿಕೊಂಡೇ ಇರುತ್ತಿದ್ದ. ನನ್ನ ಖಾಯಿಲೆ ಗುಣವಾದ ಮೇಲೆ ನಾನು ಅವನ ಜೊತೆ ಹಿಡಿದು ಪೋಲಂಡಿಗೆ ನಡೆದುಬಿಟ್ಟೆ."

"ನಿಲ್ಲು, ಆ ನಿನ್ನ ಟರ್ಕ್ ಹುಡುಗನ ಕತೆ ಏನಾಯಿತು ?"

"ಓ, ಅವನೇ—ಅವನು ಸತ್ತುಹೋದ. ಮನೆಯ ಯೋಚನೆಯಲ್ಲಿ, ಅಥವಾ ಪ್ರೇಮದಿಂದಲೇ ಇದ್ದರೂ ಇರಬಹುದು, ಅವನು ದಿನದಿನಕ್ಕೆ ಸೊರಗುತ್ತಿದ್ದ. ಬಿಸಿಲಲ್ಲಿ ನಟ್ಟಿಟ್ಟ ಎಳೆಯ ಸಸಿಯ ಹಾಗೆ ಬಾಡಿ ಬಸವಳಿದಿದ್ದ. ಹಾಗೇ ಬಾಡಿ ಬಾಡಿ ಒಂದು ದಿನ ಉದುರಿಹೋದ. ಅಲ್ಲಿ ಅವನು ಬಿಳಿಚಿ, ನೀಲಿಗಟ್ಟಿ, ಮಂಜಿನ ಹಾಗೆ ಬಿದ್ದುಕೊಂಡದ್ದು, ಆ ಹೊತ್ತಿನಲ್ಲೂ ಪ್ರೇಮದ ಬೆಂಕಿಯಲ್ಲಿ ಕರಗಿಹೋಗುತ್ತಿದ್ದದ್ದು—ನನಗಿನ್ನೂ ನೆನಪಿದೆ. ನನ್ನ ಮೇಲೆ ಬಾಗಿ ಮುತ್ತುಕೊಡು ಎನ್ನುತ್ತಿದ್ದ, ಯಾವಾಗಲೂ. ನಾನು ಅವನನ್ನು ತುಂಬ ಪ್ರೇಮಿಸುತ್ತಿದ್ದೆ. ಅವನಿಗೆ ತುಂಬ ಮುತ್ತು ಕೊಡುತ್ತಿದ್ದೆ. ಅಷ್ಟಷ್ಟಾಗಿ ಅವನು ಸೊರಗುತ್ತ ಹೋದ, ಆಮೇಲಾಮೇಲೆ ಅವನಿಗೆ ಆಚೀಚೆ ಚಲಿಸುವುದಕ್ಕೂ ಸಾಧ್ಯವಾಗುತ್ತಿರಲಿಲ್ಲ. ಹಾಗೇ ಮಲಗಿಕೊಂಡು, ತಿರುಪೆಯವನ ಹಾಗೆ ಸದಾ ನನ್ನನ್ನು ಬೇಡುತ್ತಿದ್ದ, ತನ್ನ ಪಕ್ಕದಲ್ಲೆ ಮಲಗಿಕೋ ಎಂದು, ತನ್ನ ಮೈ ಬಿಸಿಗೊಳಿಸು ಬಾ ಎಂದು. ನಾನು ಹಾಗೇ ಮಾಡಿದೆ. ಅವನ ಬದಿಯಲ್ಲಿ ಹೋಗಿ ಮಲಗಿದರೆ ಸಾಕು, ಆ ಕ್ಷಣಕ್ಕೆ ಅವನ ಮೈಯೆಲ್ಲ ಬಿಸಿಯೇರಿ ಬೆಂಕಿಯಂತಾಗುತ್ತಿತ್ತು. ಒಂದು ದಿನ ಮಾತ್ರ ನಾನು ಎದ್ದು ನೋಡುವಾಗ, ಅವನ ಮೈ ಕಲ್ಲಿನ ಹಾಗೆ ತಣ್ಣಗೆ ಕೊರೆಯುತ್ತಿತ್ತು, ಅವನು ಸತ್ತುಹೋಗಿದ್ದ. ನಾನು ಅವನಿಗಾಗಿ ಅತ್ತೆ. ಯಾರಿಗೆ ಗೊತ್ತು ಪ್ರಾಯಃ ನಾನೇ ಅವನನ್ನು ಕೊಂದಿದ್ದಿರಬಹುದು. ನಾನು ಅವನಿಗಿಂತ ಎರಡರಷ್ಟು ಪ್ರಾಯವಾಗಿದ್ದವಳು, ಬಲಿಷ್ಠಳಾಗಿದ್ದೆ, ಕೊಬ್ಬಿಕೊಂಡಿದ್ದೆ. ಆದರೆ ಅವನು—ಅವನು ಸಣ್ಣ ಮಗುವಾಗಿದ್ದ."

ಆಕೆ ಸುಮ್ಮನೆ ಅಲ್ಲೆ ತನ್ನಷ್ಟಕ್ಕೆ ಕ್ರಾಸ್ ಮಾಡಿಕೊಂಡಳು. ಅವಳು ಹಾಗೆ ಕ್ರಾಸ್ ಮಾಡಿಕೊಂಡಿದ್ದನ್ನು ನಾನು ಹಿಂದೆಂದೂ ನೋಡಿರಲಿಲ್ಲ. ಮೂರು ಸಲ ಹಾಗೆ ಮಾಡಿದಳು ; ತನ್ನಲ್ಲೇ, ಒಣ ತುಟಿಗಳ ಮಧ್ಯೆ ಏನೋ ಗೊಣಗಿಕೊಂಡಳು.

"ಹುಂ. ಅಂತೂ ನೀನು ಪೋಲಂಡಿಗೆ ಹೋದೆ—" ನಾನು ಮಾತು ಎತ್ತಿಕೊಟ್ಟೆ.

"ಹೌದು, ಹೋದೆ—ಪೋಲಂಡಿನ ಆ ಚಿಕ್ಕ ಪೋರನ ಜೊತೆಗೆ. ಅವನು ಪಶುವಿನ ಹಾಗಿದ್ದ, ಅಸಂಬದ್ಧವಾಗಿದ್ದ. ಅವನಿಗೆ ಹೆಣ್ಣು ಬೇಕೆನಿಸಿದಾಗ ನನ್ನ ಹತ್ತಿರ ಬಂದು ಮೈ ತಿಕ್ಕತೊಡಗುತ್ತಿದ್ದ, ಬೆಕ್ಕಿನ ಹಾಗೆ, ತುಟಿಗಳಲ್ಲಿ ಜೇನು ಸುರಿಸುತ್ತ. ಆಸೆ ತೀರಿದ ಮೇಲೆ ಮಾತ್ರ ನಾಲಗೆ ಚಾಟಿಯಾಗಿ ಬಾರಿಸುತ್ತಿತ್ತು. ಒಂದು ದಿನ ನಾವು ನದಿ ದಂಡೆಯ ಮೇಲೆ ಹೋಗುತ್ತಿದ್ದಾಗ ಅವನು ಏನೋ ಗರ್ವದ ಮಾತು ಹೇಳಿದ, ನನಗೆ ಅವಮಾನವಾಗುವ ಹಾಗೆ. ಓಹ್, ನನಗೆ ಕೋಪ ಉಕ್ಕಿ ಬಂತು. ಕುದಿಯುವ ಪಂಡಕೆಯ ಹಾಗೆ ನಾನು ಕೊತಗುಟ್ಟತೊಡಗಿದೆ. ಅವನನ್ನು ಸಣ್ಣ ಮಗುವಿನ ಹಾಗೆ—ಮಗುವಿನ ಹಾಗೆ ಸಣ್ಣಗೇ ಇದ್ದ ಅವನು—ಇಡೀ ಎತ್ತಿ ಹಿಚುಕಿದೆ, ಮುಖ ಕಪ್ಪುಗಟ್ಟುವ ತನಕ. ಆ ಮೇಲೆ ಅವನನ್ನು ತಿರುಪಿ, ದಂಡೆಯ ಮೇಲೆ ಎಳೆದುಕೊಂಡು ಹೋಗಿ ನೀರಿಗೆ ಎತ್ತಿ ಎಸೆದುಬಿಟ್ಟೆ. ಅವನು ದೊಡ್ಡದಾಗಿ ಕೂಗಿಕೊಂಡ, ಅದು ಒಳ್ಳೇ ತಮಾಷೆಯಾಗಿ ಕೇಳಿತು ನನಗೆ. ಅವನು ನೀರಲ್ಲಿ ಒದ್ದಾಡುತ್ತಿದ್ದುದನ್ನು ನಾನು ನೋಡ್ತುತ್ತಿದ್ದೆ, ದಡದ ಮೇಲಿಂದಲೇ. ಸ್ವಲ್ಪ ಹೊತ್ತು ಬಿಟ್ಟು ನಾನು ಅಲ್ಲಿಂದ ನಡೆದೆ. ಆಮೇಲೆ ಅವನನ್ನು ಮತ್ತೆ ಕಾಣಲಿಲ್ಲ........—ಆ ಲೆಕ್ಕದಲ್ಲಿ ನಾನು ಅದೃಷ್ಟವಂತೆ ; ನನ್ನ ಯಾರೇ ಗೆಣೆಯರನ್ನೂ ಒಮ್ಮೆ ಬಿಟ್ಟಮೇಲೆ ನಾನು ಮತ್ತೆ ಕಂಡಿದ್ದಿಲ್ಲ. ಹಾಗೆ ಮತ್ತೆ ಕಾಣುವುದೆಂದರೆ ರೇಜಿಗೆಯಾಗುತ್ತಿತ್ತು, ಹೆಣ ಕಂಡ ಹಾಗೆ."

ಮುದುಕಿ ನೀರವವಾದಳು. ಅವಳ ಕಥೆ ಕೊರೆದು ನಿಲ್ಲಿಸಿದ ಆ ಜನಗಳನ್ನೆಲ್ಲ ನಾನು ನನ್ನ ಬಗೆಗಣ್ಣಲ್ಲಿ ಕಾಣತೊಡಗಿದ್ದೆ. ಆ ಹತ್ಸಲಿಯನ್ ಪ್ರೇಮಿ : ಕೂದಲು ಮೀಸೆ ಕೆಂಪು ಉರಿಯುವ, ಪೈಪ್ ಎಳೆಯುತ್ತ ಸಾವಧಾನವಾಗಿಯೇ ಸಾವಿನ ಕಡೆ ನಡೆದ ಆ ಹತ್ಸಲಿಯನ್ ; ಅವನ ಕಣ್ಣುಗಳು, ನನಗೆ ಕಾಣುವಂತೆ, ನೀಲವಾಗಿ ಕೋಡುವಂತಿದ್ದವು, ಆ ಕಡೆಗಣ್ಣೋಟ ಕೂಡ ತೀಕ್ಷ್ಣವಿತ್ತು, ಆಳವಿತ್ತು. ಅವನ ಪಕ್ಕದಲ್ಲಿ ಕಪ್ಪು ತೊಗಲಿನ ಆ ಮೀನುಗಾರ. ಸಾಯಲು ಇಚ್ಛೆಯಿಲ್ಲದೆ ಅವನು ಅಳುತ್ತಿದ್ದ ; ಒಮ್ಮೆ ಹರ್ಷ ಚಿಮ್ಮಿಸುತ್ತಿದ್ದ ಕಣ್ಣುಗಳು ಮಂಕಾಗಿ ದಿಟ್ಟಿಸುತ್ತಿದ್ದವು—ಸಾವನ್ನು ಎದುರೇ ಕಂಡು ಬಿಳಿಚಿಹೋಗಿದ್ದ ಮುಖದ ಆಳದಿಂದ. ಕಣ್ಣೀರು ತೋಯಿಸಿದ್ದ ಆ ಮೀಸೆಗಳು ತಿರುಚಿದ ತುಟಿಯ ಆಚೀಚೆ ಕೊರಗಿನಿಂದ ಇಳಿಬಿದ್ದುಕೊಂಡಿದ್ದವು. ಹಾಗೇ, ಪ್ರಾಯ ಮೀರಿದ ಆ ಟರ್ಕ್ : ಎಲ್ಲಿದ್ದರೂ ಮುಖ್ಯಸ್ಥ ಎನ್ನುವ ಹಾಗೆ ಕಾಣುತ್ತಿದ್ದ ; ಆತ ನಿಶ್ಚಿತವಾಗಿ ಅದೃಷ್ಟವಾದಿಯೇ ; ದಬ್ಬಾಳಿಕೆಯ ಪ್ರವೃತ್ತಿ. ಅವನ ಬದಿಯಲ್ಲಿ ಅವನು

ಮಗ : ಪೂರ್ವ ದೇಶಗಳ ಹೂವಿನ ಹಾಗಿದ್ದ, ಹಾಗೇ ಕೋಮಲವಾಗಿ, ಹಾಗೇ ಬಿಳಿಚಿಕೊಂಡು ; ಮುತ್ತುಗಳಿಂದಲೇ ನಂಜು ಏರಿದ ಅಂಥ ನವುರು. ಮತ್ತೆ ಆ ಪೋಲಂಡಿನವ : ಮಾತಾಳಿ, ಕ್ರೂರಿ, ರಕ್ತ ಹೆಪ್ಪುಗಟ್ಟಿದವ. ಅವರೆಲ್ಲ ನನ್ನ ಬದಿಗೇ ಕೂತಿದ್ದಾರೆ ಎನ್ನಿಸುತ್ತಿತ್ತು, ಆದರೆ ಎಲ್ಲರೂ ಈಗ ನಿಸ್ತೇಜರಾಗಿದ್ದರು, ನೆರಳು ಮಾತ್ರರಾಗಿದ್ದರು ; ಈಕೆ ಒಂದು ಕಾಲದಲ್ಲಿ ಯಾರು ಯಾರನ್ನೆಲ್ಲ ಮಂದ ಉಕ್ಕಿ ಮುತ್ತಿಟ್ಟಿದ್ದಳೋ, ಅವರೆಲ್ಲರೂ ಈಗ ನನ್ನ ಜೊತೆಗಿದ್ದರು, ಈಗಲೂ ಜೀವ ಟುಕುಗುಡುತ್ತ ; ಆದರೆ ವಯಸ್ಸು ಸಂದವರಾಗಿದ್ದರು, ರಕ್ತಹೀನರಾಗಿದ್ದರು, ಮಾಂಸಹೀನರಾಗಿದ್ದರು ; ಆಸೆಗಳೆಲ್ಲ ಕಳಚಿಬಿದ್ದ ಹೃದಯ, ಕಾಂತಿ ಕಳೆದ ಕಣ್ಣುಗಳು, ತಮ್ಮ ಹಾಗೇ ಕೇವಲ ನೆಳಲಾಗಿದ್ದಂಥ ಕಣ್ಣು ಹೃದಯಗಳು.

ಮುದುಕಿ ಮುಂದುವರಿಸಿದಳು :

"ಪೋಲಂಡಿನಲ್ಲಿ ಬದುಕುವುದು ನನಗೆ ಕಷ್ಟ ಕಂಡಿತು. ಅಲ್ಲಿನ ಜನ ಕಳ್ಳಬದುಕಿನ ಜನ, ರಕ್ತ ತಣ್ಣಪೇರಿದವರು. ಅವರ ಹಾವಿನಂಥ, ಬರೀ ಪಿಸುಗುಟ್ಟುವಂಥ. ಭಾಷೆ ನನಗೆ ಆಡುವುದಕ್ಕೇ ಬರಲಿಲ್ಲ. ಅವರೇಕೆ ಹೀಗೆ ಪಿಸುಗುಟ್ಟುತ್ತಾರೆ ? ಅವರು ಅಷ್ಟು ಸುಳ್ಳು ಬದುಕಿನ ಜನ, ಅದಕ್ಕೇ ದೇವರು ಅವರಿಗೆ ಅಂಥ ಪಿಸುಗುಡುವ ಭಾಷೆ ಸೃಷ್ಟಿಸಿ ಕೊಟ್ಟ. ನಾನು ಅಲ್ಲಿಂದಂತೂ ಹೊರಟುಬಿಟ್ಟೆ, ಎಲ್ಲಿಗೆ ಎಂಬುದು ನನಗೇ ಗೊತ್ತಿರಲಿಲ್ಲ. ಆ ಪೋಲಂಡಿನ ಜನ ನಿಮ್ಮ, ಅಂದರೆ ರಷ್ಯನರ ಮೇಲೆ ಬೀಳಲು ತಯಾರಾಗುತ್ತಿದ್ದರು ಆಗ. ನಾನು ಬೊಕ್ನಿಯಾ ಪಟ್ಟಣಕ್ಕೆ ಬಂದೆ. ಅಲ್ಲಿ ಒಬ್ಬ ಯಹೂದಿ ನನ್ನನ್ನು ಕೊಂಡುಕೊಂಡ. ತನಗಾಗಿ ಅಲ್ಲ, ನನ್ನ ದೇಹದ ವ್ಯಾಪಾರಕ್ಕೋಸ್ಕರ. ನಾನು ಅದಕ್ಕೆ ಒಪ್ಪಿದೆ. ಏನು ಬೇಕಾದರೂ ಮಾಡಬಲ್ಲವರು ಸುಲಭವಾಗಿ ತಮ್ಮ ಬದುಕು ಗಳಿಸಿಕೊಳ್ಳುತ್ತಾರೆ. ಏನಾದರೂ ಮಾಡುವುದು ನನಗೆ ಗೊತ್ತಿರಲಿಲ್ಲ. ಅದಕ್ಕಾಗಿ ನಾನು ನನ್ನ ದೇಹದಿಂದಲೇ ದಂಡ ತೆರಬೇಕಾಯಿತು, ತೆತ್ತೆ. ಆದರೆ ನಾನು ನನ್ನಲ್ಲೇ ಒಂದು ನಿಶ್ಚಯ ಮಾಡಿಕೊಂಡಿದ್ದೆ—ನನ್ನ ಊರಿಗೆ ನಾನು ಹಿಂತಿರುಗಬೇಕು, ಅದಕ್ಕೆ ಬೇಕಾಗುವಷ್ಟು ಹಣ ಇಲ್ಲಿ ಗಳಿಸಿಕೊಳ್ಳಬೇಕು. ಹಾಗೆ ಗಳಿಸಲಿಕ್ಕೆ ಆಗದಿದ್ದರೆ ಆ ತಕ್ಷಣವೇ ಇಲ್ಲಿನ ಬಂಧನಗಳನ್ನೆಲ್ಲಾ, ಎಷ್ಟೇ ಗಟ್ಟಿಯಾಗಿದ್ದರೂ, ಹರಿದುಕೊಂಡು ಹೊರಟುಬಿಡಬೇಕು —ಎಂದು. ಅಲ್ಲಿನ ನನ್ನ ಬದುಕಿನ ಬಗ್ಗೆ ನಾನು ದೂರುವ ಹಾಗಿರಲಿಲ್ಲ. ದೊಡ್ಡ ದೊಡ್ಡ ಶ್ರೀಮಂತರುಗಳೆಲ್ಲ ಬಂದು ನನ್ನ ಜೊತೆ ಔತಣ ತಿನ್ನುತ್ತಿದ್ದರು. ಒಂದೊಂದು ಔತಣಕ್ಕೂ ಲೆಕ್ಕವಿಲ್ಲದಷ್ಟು ಖರ್ಚು ಮಾಡುತ್ತಿದ್ದರು. ನನಗಾಗಿ ಅವರು ಒಬ್ಬರ ಜೊತೆ ಒಬ್ಬರು ಹೋರಾಡಿಕೊಳ್ಳುತ್ತಿದ್ದರು, ಹಾಳಾಗುತ್ತಿದ್ದರು. ಅವರಲ್ಲಿ ಒಬ್ಬ ಬಹಳಕಾಲ ನನ್ನ ಹೃದಯ ಗೆಲ್ಲಲು ಏನೇನೋ ಮಾಡಿದ. ಕೊನೆಯಲ್ಲಿ : ಒಂದು ದಿನ ಅವನು ನನ್ನ ಆಳಿನ ಹತ್ತಿರ ಒಂದು ದೊಡ್ಡ ಚೀಲ ಹೊರಿಸಿಕೊಂಡು ಬಂದ, ಆ ಚೀಲವನ್ನು ತಾನೇ ಎತ್ತಿ ನನ್ನ ತಲೆಯ ಮೇಲೆ ಸುರಿದು ಬರಿದು ಮಾಡಿದ. ನನ್ನ ಮೇಲೆ

ಬಂಗಾರದ ನಾಣ್ಯಗಳು ಮಳೆಗರೆದಿದ್ದವು ; ಅವು ನೆಲಕ್ಕೆ ಬಿದ್ದು ಝಣಗುಟ್ಟುವಾಗ ನನ್ನ ಹೃದಯ ಹರ್ಷದಿಂದ ಉಕ್ಕುತ್ತಿತ್ತು. ಆದರೂ ನಾನು ಆತನನ್ನು ನಿವಾರಿಸಿಬಿಟ್ಟೆ. ಅವನ ಮುಖದಲ್ಲಿ ಎಣ್ಣೆ ಸುರಿಯುತ್ತಿತ್ತು, ಕೊಬ್ಬಿ ಮುದ್ದೆ ಮುದ್ದೆಯಾಗಿತ್ತು. ಅವನ ಹೊಟ್ಟೆ ದಿಂಬಿನ ಹಾಗೆ ಊದಿಕೊಂಡಿತ್ತು. ಅವನನ್ನು ನೋಡಿದರೆ ಚರ್ಮಕ್ಕೆ ಹುಲ್ಲು ತುರುಕಿಟ್ಟ ಹಂದಿಯ ಆಕೃತಿಯ ಹಾಗೆ ಕಾಣುತ್ತಿತ್ತು. ತನ್ನ ಹೊಲ ಮನೆ ಕುದುರೆ—ಎಲ್ಲವನ್ನೂ ಮಾರಿ ನನಗಾಗಿ ಆತ ಅಷ್ಟು ಚಿನ್ನವನ್ನು ತಂದಿದ್ದಾನೆ ಎಂಬುದು ಗೊತ್ತಾದರೂ ನಾನು ಆತನನ್ನು ಹೊರಹಾಕಿಬಿಟ್ಟೆ. ಆದರೆ ಅಷ್ಟು ಹೊತ್ತಿಗೆ ನಾನು ಇನ್ನೊಬ್ಬ ಶ್ರೀಮಂತ ಸಭ್ಯನಲ್ಲಿ ಅನುರಕ್ತಗೊಂಡಿದ್ದೆ. ಅವನ ಮುಖದ ತುಂಬ ಕತ್ತಿಯ ಗಾಯಗಳ ಗುರುತುಗಳಿದ್ದವು ; ಮುಖದ ಉದ್ದ ಅಡ್ಡ ಕತ್ತರಿಸಿ ಕಾಣುತ್ತಿದ್ದ ಟರ್ಕಿ-- ಕತ್ತಿಗಳ ಗೀರು ಕಲೆಗಳು. ಗ್ರೀಕರು ಟರ್ಕರ ಜೊತೆ ಹೋರಾಡುತ್ತಿದ್ದಾಗ ಇವನು ಗ್ರೀಕರ ಕಡೆಯಿಂದ ಹೋರಾಟಕ್ಕೆ ಹೋಗಿದ್ದವನು ; ಆಗಷ್ಟೆ ಮರಳಿ ಬಂದಿದ್ದ. ಇಕೋ, ನಿಜವಾಗಿ ಇವನೊಬ್ಬ ಮನುಷ್ಯ, ನೋಡು—ಎನ್ನುವ ಹಾಗಿದ್ದ. ಇವನು ಪೋಲಂಡಿನವ. ಈತನಿಗೆ ಗ್ರೀಕರ ಸಂಬಂಧವಾದರೂ ಏನಿತ್ತು ? ಆದರೂ ಅವನು ಹೋದ, ಟರ್ಕರ ಜೊತೆ ಹೋರಾಡುವ ಗ್ರೀಕರಿಗೆ ನೆರವಾಗಿ ಹೋರಾಡಿದ. ಟರ್ಕರು ಈತನಿಗೆ ಮರೆಯಲಾಗದ ಪೆಟ್ಟನ್ನೇ ಕೊಟ್ಟಿದ್ದರು. ಅವರ ಹೊಡೆತಕ್ಕೆ ತನ್ನ ಒಂದು ಕಣ್ಣನ್ನೇ ಕಳೆದುಕೊಂಡಿದ್ದ, ಎಡಗೈಯ ಎರಡು ಬೆರಳುಗಳು ಕತ್ತರಿಸಿ ಹೋಗಿದ್ದವು. ಹೇಳಿದ ಹಾಗೆ, ಇವನು ಪೋಲಂಡಿನವ, ಇವನಿಗೂ ಗ್ರೀಕರಿಗೂ ಯಾವ ಸಂಬಂಧ ? ಆದರೂ ಇವನು ಅವರಿಗೋಸ್ಕರ ಹೋರಾಡಿದ. ಸದಾ ಶೌರ್ಯ ಸಾಹಸಗಳಿಗಾಗಿಯೇ ಹಾತೊರೆಯುತ್ತಿದ್ದ ಜಾತಿ ಅವನದು. ಹಾಗೆ ಶೌರ್ಯಸಾಹಸ ಗಳಿಗಾಗಿ ಸದಾ ಹಂಬಲಿಸುವಂಥವರಿಗೆ ಅದಕ್ಕೆ ತಕ್ಕ ಅವಕಾಶ ದೊರಕಿಯೇ ದೊರಕು ತ್ತದೆ, ನಿಶ್ಚಯವಾಗಿ. ಈ ಬದುಕೇ ಅಂಥ ಅವಕಾಶಗಳಿಂದ ಇಡಿಕಿರಿದುಕೊಂಡದ್ದು. ತನಗೆ ಅಂಥ ಅವಕಾಶ ಸಿಕ್ಕಿಲ್ಲ ಎಂದು ಯಾರಾದರೂ ಗೊಣಗುವವನಿದ್ದರೆ ಅದು ಅವನು ಸೋಮಾರಿ ಎನ್ನುವುದನ್ನೋ, ಹೇಡಿ ಎನ್ನುವುದನ್ನೋ ಅಥವಾ ಬದುಕನ್ನು ಅರ್ಥಮಾಡಿಕೊಳ್ಳಲಾರ ಎನ್ನುವುದನ್ನೋ ಸೂಚಿಸುತ್ತದೆ, ಅಷ್ಟೆ. ಯಾರೇ ಆಗಲಿ, ಈ ಬದುಕನ್ನು ಅರ್ಥಮಾಡಿಕೊಂಡಿದ್ದರೆ, ತನ್ನ ಹಿಂದೆ ಏನಾದರೊಂದು ತನ್ನ ನೆನಪು ಕೆತ್ತಿಹೋಗಲು ಹಂಬಲಿಸುತ್ತಾನೆ. ನಿಜವಾಗಿ ಇಂಥ ಹಂಬಲ ಜನರಲ್ಲಿ ಉರಿಯು ತ್ತಿದ್ದದ್ದೇ ಆದರೆ ಬದುಕು ಅವರನ್ನು ಎಂದಾದರೂ ಹೀಗೆ ನಿಶ್ಶೇಷ ನುಂಗಿ ನೀರು ಕುಡಿಯಲು ಸಾಧ್ಯವಾಗುತ್ತಿತ್ತೆ ?....ಆ ಕಲೆ-ಮುಖದ ಮನುಷ್ಯ ತುಂಬ ಒಳ್ಳೆಯವ ನಾಗಿದ್ದ ; ಒಂದು ಒಳ್ಳೆಯ ಕೆಲಸ ಮಾಡುವುದಕ್ಕೆ ಭೂಮಿಯ ಆಚೆ ತುದಿಗೆ ಬೇಕಾ ದರೂ ಹೋಗಿಬಿಡಬಲ್ಲವನಾಗಿದ್ದ. ಈಚೆ ನಡೆದ ದಂಗೆಯಲ್ಲಿ ನಮ್ಮ ಜನ ಆತನನ್ನು ಕೊಂದುಬಿಟ್ಟಿರಬೇಕು ಎಂದು ನನಗೆ ಸಂಶಯ. ನೀವು ಆ ಮಾಗ್ಯರ್ ಜನರ

ಮೇಲೆ ಬಿದ್ದು ಹೋದದ್ದಾದರೂ ಯಾತಕ್ಕಾಗಿ ?—ಶ್, ಹೋಗಲಿ ಬಿಡು, ಆ ಸುದ್ದಿಯೇ ಬೇಡ, ಏನೂ ಹೇಳಬೇಡ."

ನನ್ನ ನಾಲಗೆ ತಡೆಹಿಡಿಯುವಂತೆ ಸೂಚನೆ ಕೊಟ್ಟು ಆ ಮುದುಕಿ ತಾನೂ ನೀರವಳಾದಳು, ಆಲೋಚನಾಪರಳಾಗಿ ಕೂತಳು.

"ನನಗೆ ಒಬ್ಬ ಮಾಗ್ಯರ್‌ನ ಪರಿಚಯವಿತ್ತು. ಹೀಗೆ ಒಂದು ದಿನ ಅವನು ನನ್ನನ್ನು ಬಿಟ್ಟು ನಡೆದ, ಚಳಿಗಾಲದ ಆಳದಲ್ಲಿ ಒಂದು ದಿನ. ಮತ್ತೆ ಬೇಸಿಗೆ ಬಂದು ಮಂಜು ಕರಗಿದಾಗ, ಒಂದು ಬಯಲಲ್ಲಿ ಆತ ನೋಡುವುದಕ್ಕೆ ಸಿಕ್ಕಿದ : ತಲೆಯಲ್ಲಿ ಗುಂಡು ಹೊಕ್ಕು ಬಿದ್ದಿದ್ದ. ಪ್ಲೇಗ್‌ನಲ್ಲಿ ಜನ ಸಾಯುವ ಹಾಗೇ ಪ್ರೇಮದಿಂದಲೂ ಸಾಯುತ್ತಾರೆ ; ಹೌದು, ಲೆಕ್ಕಮಾಡಿ ನೋಡಿದರೂ ತಿಳಿಯುತ್ತದೆ, ಅದಕ್ಕಿಂತ ಈ ಸಂಖ್ಯೆ ಕಡಿಮೆಯಲ್ಲ.........ಓ, ನಾನು ಯಾತರ ಬಗ್ಗೆ ಮಾತಾಡುತ್ತಿದ್ದೆ ?—ಹ್ಞಾ ನಿಜ, ಪೋಲೆಂಡ್. ಅಲ್ಲೇ ನಾನು ನನ್ನ ಕೊನೇ ದಾಳ ಎಸೆದು ಕೊನೇ ಆಟ ಆಡಿದ್ದು. ಅಲ್ಲೂ ಒಬ್ಬ ಸಭ್ಯ ಮನುಷ್ಯ ಸಿಕ್ಕಿದ್ದ ನನಗೆ. ತುಂಬ ಚೆನ್ನಾಗಿದ್ದ, ಅಸಾಧ್ಯ ಚೆನ್ನಾಗಿದ್ದ. ಆದರೆ ಆ ಹೊತ್ತಿಗೆ ನನಗೆ ವಯಸ್ಸಾಗಿ ಹೋಗಿತ್ತು, ವಯಸ್ಸಾಗಿ ಹೋಗಿತ್ತು !......ಆ ಹೊತ್ತಿಗೆ ನನಗೆ ನಲವತ್ತು ವರ್ಷವಿರಬೇಕು, ಕನಿಷ್ಠ ನಲವತ್ತಾದರೂ ಆಗಿತ್ತು. ಅವನೋ ಒಳ್ಳೇ ಗರ್ವದವನು. ಹೆಣ್ಣುಗಳು ಮುತ್ತಿ ಮುದ್ದಿಸಿ, ಮುದ್ದಿಸಿ, ಸೊಕ್ಕಿದವನಾಗಿದ್ದ. ನಾನಂತೂ ಅವನಲ್ಲಿ ಇಡೀ ಅನುರಕ್ತಳಾಗಿಬಿಟ್ಟಿದ್ದೆ. ಅವನೇನೋ, ತಾನು ಕರೆಯುವುದರಲ್ಲಿ ಬಂದು ಬಿಡತಕ್ಕವಳು ಇವಳು ಎಂದು ತಿಳಿದುಕೊಂಡಿದ್ದ. ಆದರೆ ನಾನು ಮಾತ್ರ ಅಷ್ಟು ಸುಲಭವಾಗಿ ಕೊಟ್ಟುಕೊಳ್ಳಲಿಲ್ಲ. ಎಂದೂ ನಾನು ಯಾರೊಬ್ಬರ ಗುಲಾಮಳಾಗಿ ಇದ್ದದ್ದೇ ಇಲ್ಲ. ಮತ್ತು, ಆ ಕಾಲಕ್ಕೆ ನಾನು ಒಬ್ಬ ಯಹೂದಿಯನ್ನು ಆಗಷ್ಟೆ ಬಿಟ್ಟುಬಂದಿದ್ದೆ. ಆಗ ನಾನು ವಾಸಮಾಡುತ್ತಿದ್ದದ್ದು ಕ್ರಾಕಾಫ್‌ನಲ್ಲಿ. ಒಳ್ಳೇ ಶ್ರೀಮಂತಿಕೆಯಲ್ಲೇ ಇದ್ದೆ ; ಕುದುರೆಗಳು, ಚಿನ್ನ, ಆಳುಕಾಳುಗಳು —ಏನು ಬೇಕೋ ಎಲ್ಲಾ ಇದ್ದವು. ಆ ಸೊಕ್ಕಿನ ಚೆಲುವ ನನ್ನಲ್ಲಿ ಬಂದ, ಬರುತ್ತಿದ್ದ ಹಾಗೇ ನಾನು ಅವನ ತೋಳಲ್ಲಿ ಓಡಿ ಹೋಗಿ ಬಿದ್ದುಕೊಳ್ಳುತ್ತೇನೆ ಎಂದು ಅವನ ಎಣಿಕೆಯಾಗಿತ್ತು. ನಮ್ಮಿಬ್ಬರಲ್ಲಿ ಒಳ್ಳೇ ಕಾವೇರಿದ ಸೆಣಸಾಟವೇ ನಡೆದು ಹೋಯಿತು. ಎಷ್ಟೋ ಹೊತ್ತು ಹಾಗೆ ಹೋರಾಡಿದೆವು. ಆ ಒತ್ತಡದಲ್ಲಿ ನಾನು ಬಸವಳಿದು ಹೋಗಿದ್ದೆ. ಆದರೂ ಕೊನೆಯಲ್ಲಿ ನಾನು ಗೆದ್ದಿದ್ದೆ. ಅವನು ನನ್ನ ಎದುರು ಮಂಡಿಯೂರಿದ್ದ. ಆದರೆ, ನಾನು ಅವನಿಗೆ ಒಂದು ಸಲ ಸಿಕ್ಕಿದ್ದಷ್ಟೇ, ಅಷ್ಟರಲ್ಲಿ ಅವನು ನನ್ನನ್ನು ತೆಗೆದು ಬಿಸಾಕಿಬಿಟ್ಟ. ಆಗಲೇ ನನಗೆ ತಿಳಿದದ್ದು, ನನಗೆ ವಯಸ್ಸಾಗಿಬಿಟ್ಟಿದೆ ಎಂದು. ಎಂಥ ಕಹಿಯಾದ ತಿಳಿವು !.......ಗಂಟಲಲ್ಲಿ ವಿಷ ಸಿಕ್ಕಿಕೊಂಡ ಹಾಗೆ !...... ನಾನೇನೋ ಅವನನ್ನು, ಆ ದೆವ್ವವನ್ನು, ಪ್ರೀತಿಸುತ್ತಲೇ ಇದ್ದೆ. ಆದರೆ ಅವನು ನಾನು ಕಂಡಾಗ ಎದುರೇ ನಗುತ್ತಿದ್ದ, ಅದೊಂದು ಪಶು, ದೆವ್ವ ! ಬೇರೆಯವರ ಹತ್ತಿರ ನನ್ನ

ಬಗ್ಗೆ ಹೀನಾಯವಾಗಿ ಮಾತಾಡುತ್ತಿದ್ದ, ಅದು ನನಗೆ ಗೊತ್ತಾಗುತ್ತಿತ್ತು. ಓಹ್. ಆ ಕಾಲದಲ್ಲಿ ನಾನು ಎಷ್ಟು ನರಳಿದೆ ! ಆದರೆ ಅವನು ಅಲ್ಲೇ ಇದ್ದ, ನನ್ನ ಹತ್ತಿರವಲ್ಲ. ಏನೇ ಆದರೂ ನಾನು ಮಾತ್ರ ಅವನಲ್ಲಿ ಮೋಹಗೊಂಡುಬಿಟ್ಟಿದ್ದೆ. ಆಮೇಲೆ ಒಂದು ದಿನ ಅವನು ರಷ್ಯನರ ಮೇಲೆ ಕಾದಾಡಲು ಹೋದ ; ನನಗೆ ತಡೆದುಕೊಳ್ಳಲಾಗಲಿಲ್ಲ. ನನ್ನನ್ನು ನಾನು ಹಿಡಿತದಲ್ಲಿಟ್ಟುಕೊಂಡಿರಬೇಕು ಎಂದು ಬಹಳ ಪ್ರಯತ್ನ ಮಾಡಿದೆ, ಆದರೆ ನನ್ನ ಭಾವನೆಗಳೇ ನನ್ನ ಕೈ ತಪ್ಪಿಸಿ ಕುಣಿಯತೊಡಗಿದ್ದವು. ನಾನು ಅವನ ಹತ್ತಿರಕ್ಕೇ ಹೋಗಲು ನಿಶ್ಚಯಿಸಿದೆ. ಅವನು ಪಡೆಯನ್ನು ಕೂಡಿ ವಾರ್ಸಾದ ಹತ್ತಿರ ಒಂದು ಕಾಡಿನಲ್ಲಿ ಬೀಡುಬಿಟ್ಟಿದ್ದ.

"ನಾನು ಅಲ್ಲಿ ತಲುಪಿದಾಗ ತಿಳಿಯಿತು—ನಿಮ್ಮ ಜನ ಈ ಸೈನಿಕರನ್ನೆಲ್ಲ ಬಡಿದು, ಕೆಲವರನ್ನು—ಈತನನ್ನೂ ಕೂಡಿ—ಸೆರೆಹಿಡಿದು ಒಯ್ದಿದ್ದರೆಂಬುದು. ಅಲ್ಲೆ ಹೆಚ್ಚು ದೂರವಲ್ಲದ ಒಂದು ಹಳ್ಳಿಯಲ್ಲಿ ಅವರನ್ನು ಇಟ್ಟಿದ್ದರಂತೆ.

"ಆಯಿತು, ನಾನಿನ್ನು ಅವನನ್ನು ನೋಡುವುದಿಲ್ಲ—ಎಂದುಕೊಂಡೆ ನನ್ನಷ್ಟಕ್ಕೇ. ಆದರೆ ಅವನನ್ನು ನೋಡಲೇಬೇಕು ಎಂದೂ ಯೋಚಿಸಿದೆ, ಹತಾಶಳಾಗಿಯೇ. ಹಾಗೆ ಅವನನ್ನು ನೋಡುವುದಕ್ಕೆ ಒಂದು ಹಾದಿಯನ್ನೂ ಹುಡುಕಿದೆ. ಭಿಕ್ಷುಕಿಯ ಹಾಗೆ ವೇಷ ತೊಟ್ಟುಕೊಂಡೆ, ಕಾಲು ಕುಂಟಾದವಳ ಹಾಗೆ ನಟಿಸಿದೆ. ಮುಖ ಮರೆಸಿಕೊಂಡು ಅವನನ್ನು ಸೆರೆಯಿಟ್ಟಿದ್ದ ಹಳ್ಳಿಯ ಕಡೆ ಹೊರಟೆ. ಆ ಹಳ್ಳಿಯ ತುಂಬ ಸೈನಿಕರು ಮತ್ತು ಕೊಸಾಕ್‌ರೇ ತುಂಬಿಬಿಟ್ಟಿದ್ದರು. ಅಲ್ಲಿರುವುದಕ್ಕೂ ತುಂಬ ಕಷ್ಟವಾಯಿತು ನನಗೆ. ಈ ಪೋಲೆಂಡಿನ ಸೆರೆಯಾಳುಗಳನ್ನು ಕೂಡಿಹಾಕಿದ ಜಾಗ ನನಗೆ ತಿಳಿದಾಗ ಅದರ ಹತ್ತಿರ ಹೋಗುವುದೂ ಕೂಡಾ ಕಷ್ಟವೇ ಎಂಬುದು ನನಗೆ ತಿಳಿಯಿತು. ಏನೇ ಆದರೂ ನಾನು ಅಲ್ಲಿಗೆ ಹೋಗಲೇಬೇಕು ಎಂದು ಹಟ ಮಾಡಿದ್ದೆ. ಒಂದು ರಾತ್ರಿ ಹಾಗೆ ಹೊರಟೇಬಿಟ್ಟೆ. ಹಾದಿಯಲ್ಲಿ ಒಂದು ಕಾಯಿಪಲ್ಲೆ ಹೊಲದ ಮಡಿಗಳ ಮಧ್ಯೆ ಗುಟ್ಟಾಗಿ ತೆವಳಿಕೊಂಡು ಹೋಗುತ್ತಿದ್ದೆ. ಸ್ವಲ್ಪ ಹೊತ್ತಿನಲ್ಲಿ ನನ್ನ ಎದುರೇ ಒಬ್ಬ ಕಾವಲುಗಾರ ನಿಂತುಬಿಟ್ಟದ್ದು ಕಂಡಿತು. ಸೆರೆಯಾಳುಗಳು ಮಾತಾಡುತ್ತಿದ್ದುದು ದೊಡ್ಡದಾಗಿ ಹಾಡಿಕೊಳ್ಳುತ್ತಿದ್ದದ್ದು ಅಲ್ಲಿಂದಲೇ ನನಗೆ ಕೇಳುತ್ತಿತ್ತು. ಎಲ್ಲ ಕೂಡಿ ಕ್ರಿಸ್ತಮಾತೆಯ ಬಗ್ಗೆ ಒಂದು ಹಾಡು ಹೇಳಲು ತೊಡಗಿದ್ದರು. ಅದರಲ್ಲಿ ಈ ನನ್ನ ಚೆಲುವನೂ ಸೇರಿಕೊಂಡಿದ್ದ. ಇದ್ದಕ್ಕಿದ್ದ ಹಾಗೆ, ಆಗ ನನಗನ್ನಿಸಿತು—ಒಂದು ಕಾಲದಲ್ಲಿ ಜನ ನನಗಾಗಿ ಹೀಗೆ ತೆವಳಿಕೊಂಡು ಬರುತ್ತಿದ್ದರು, ಈಗ ನಾನು ಒಬ್ಬ ಮನುಷ್ಯನಿಗಾಗಿ ಹೀಗೆ ಹುಳುವಿನ ಹಾಗೆ ತೆವಳುತ್ತಿದ್ದೇನೆ, ಅಥವಾ ನನ್ನ ಸಾವಿನ ಅಂಚಿಗೇ ತೆವಳುತ್ತಿದ್ದೇನೆ—ಎಂದು. ಆ ಯೋಚನೆಯಲ್ಲಿ ಬಾಯಿ ಗಂಟಲೆಲ್ಲ ಕಹಿಕಹಿಯಾಗಿತ್ತು. ಎದುರಿದ್ದ ಕಾವಲುಗಾರ ತನ್ನ ಕಿವಿ ತುರಿಸಿಕೊಂಡು ಎಚ್ಚರವಾಗಿ ಮುಂದಕ್ಕೆ ಬಾಗಿದ. ನಾನೇನು ಮಾಡಬೇಕು ?........ ಎದ್ದು ನಿಂತು ಅವನ ಕಡೆಗೇ ನಡೆದೆ. ನನ್ನ ಹತ್ತಿರ ಚಾಕುವಾಗಲಿ ಅಥವಾ ಮತ್ತಾ

ವುದೇ ಆಯುಧವಾಗಲಿ ಇರಲಿಲ್ಲ, ನನ್ನ ಕೈಗಳು ಮತ್ತು ನಾಲಗೆ ಬಿಟ್ಟರೆ. ಒಂದು ಚಾಕುವನ್ನು ಇಟ್ಟುಕೊಳ್ಳದೆ ಬಂದೆನಲ್ಲ ಎಂದು ವ್ಯಸನಪಟ್ಟುಕೊಂಡೆ. ಕಾವಲುಗಾರ ತನ್ನ ಕೋವಿಯ ಮೊನೆಯನ್ನು ನನ್ನ ಕುತ್ತಿಗೆಗೇ ಗುರಿಯಿಟ್ಟ. ಅಷ್ಟರಲ್ಲಿ ನಾನು ಮೆಲ್ಲಗೆ ಪಿಸುಗುಟ್ಟಿದೆ: "ನಿಲ್ಲು, ಒಂದೇ ಕ್ಷಣ ನಾನು ಏನು ಹೇಳುತ್ತೇನೋ ಕೇಳು. ನಿನಗೆ ಹೃದಯ ಎನ್ನುವುದಿದ್ದರೆ ಒಂದು ಕ್ಷಣ ಕೇಳು. ನಾನು ನಿನಗೆ ಏನೂ ಕೊಡಲಾರೆ. ಆದರೂ ನಿನ್ನ ಕರುಣೆ ಬೇಡುತ್ತೇನೆ." ಅವನು ತನ್ನ ಕೋವಿಯನ್ನು ಕೆಳಕ್ಕಿಳಿಸಿ ಮೆಲು ದನಿಯಲ್ಲಿ ಬಗ್ಗಿ ಹೇಳಿದ: "ಏಯ್, ಆಚೆ ಹೋಗು. ಅಯ್ಯೋ ಮುದುಕಿ, ಇಲ್ಲಿಗೆ ಯಾತಕ್ಕಾದರೂ ಬಂದೆ?" "ನನ್ನ ಮಗ ಅಲ್ಲಿ ಸೆರೆಯಾಗಿದ್ದಾನೆ" ಎಂದು ಹೇಳಿದೆ ಅವನಿಗೆ. "ನನ್ನ ಮಗ, ಸೈನಿಕ—ಅಲ್ಲಿ ಸೆರೆಯಾಗಿದ್ದಾನೆ......—ನಿನಗೆ ಏನೂ ಅನ್ನಿಸುವುದೇ ಇಲ್ಲವೇ? ನೀನೂ ಯಾರೋ ಒಬ್ಬರ ಮಗ. ಇಲ್ಲಿ ನೋಡು, ನನ್ನ ಕಡೆ, ನಿನ್ನಂಥವನೇ ಒಬ್ಬ ಮಗ ಇದ್ದಾನೆ ನನಗೆ, ಅವನು ಇಲ್ಲಿ ಸೆರೆಯಲ್ಲಿದ್ದಾನೆ. ಈಗಲೂ ನಿನಗೆ ಗೊತ್ತಾಗುವುದಿಲ್ಲವೆ? ಒಂದೇ ಸಲ ಅವನನ್ನು ನೋಡಲು ಬಿಡು. ಪ್ರಾಯಶಃ ಅವನು ಸದ್ಯವೇ ಸಾಯುತ್ತಾನೆ, ಪ್ರಾಯಶಃ ನೀನೂ ಕೂಡ ನಾಳೆಯೇ ಸಾಯಬಹುದು, ಯಾರಾದರೂ ಕೊಂದು ಮುಗಿಸಿಬಿಡಬಹುದು. ನಿನ್ನ ತಾಯಿ ಆಗ ನಿನ್ನ ಬಗ್ಗೆ ಕಣ್ಣೀರು ಸುರಿಸುವುದಿಲ್ಲವೇ? ಹಾಗೆ ಸಾಯುವಾಗ ನಿನಗೆ ಅವಳ ಕಡೆ, ನಿನ್ನ ತಾಯಿಯ ಕಡೆ, ಒಂದು ಸಲವಾದರೂ ನೋಡದೆ ಸಾಯುವುದು ಕಷ್ಟವಾಗುವುದಿಲ್ಲವೆ? ಯಾವ ಮಗನಾದರೇನು, ಕಷ್ಟ ಒಂದೇ ಅಲ್ಲವೆ? ನಿನ್ನ ಬಗ್ಗೆ ನಿನಗೆ ಕರುಣೆಯಿರಲಿ, ಹಾಗೇ ನನ್ನ ಮಗನ ಬಗ್ಗೆ, ಅವನ ತಾಯಿಯಾದ ನನ್ನ ಬಗ್ಗೆ!"

"ಹೀಗೇ ಅವನ ಹತ್ತಿರ ವಾದ ಮಾಡುತ್ತ ಎಷ್ಟು ಹೊತ್ತು ನಿಂತು ಬಿಟ್ಟಿದ್ದೆನೋ. ಮಳೆ ಸುರಿಯುತ್ತಿತ್ತು, ನಮ್ಮನ್ನು ತಪತಪ ತೋಯಿಸುತ್ತ. ಗಾಳಿ ಬೀಸುತ್ತಿತ್ತು, ಹಲುಬಿ ಮೊರೆಯಿಡುತ್ತಿತ್ತು; ಒಮ್ಮೆ ಬೆನ್ನಿಗೆ ಬಡಿದು ಒಮ್ಮೆ ಎದೆಗೆ ಬಡಿದು ಕಾಡಿಸುತ್ತಿತ್ತು. ನಾನು ಆ ಕಲ್ಲು ಹೃದಯದ ಕಾವಲುಗಾರನ ಎದುರು ನಿತ್ತೇ ಇದ್ದೆ, ತೂಗುತ್ತ ವಾಲುತ್ತ. ಅವನು ಮಾತ್ರ ಪ್ರತಿಯೊಂದು ಸಲವೂ 'ಆಗದು' ಎಂದು ಒಂದೇ ಮಾತು ಹೇಳುತ್ತಿದ್ದ. ಮತ್ತು, ಪ್ರತಿ ಸಲ ಆ ನಿರ್ಭಾವಶಬ್ದವನ್ನು ಕೇಳಿದಾಗಲೂ ನನಗೆ ನನ್ನ ಆರ್ಕಡೆಕ್‌ನನ್ನು ನೋಡುವ ಹಂಬಲ ಮತ್ತೂ ತೀವ್ರವಾಗಿ ಎದ್ದು ಉರಿಯತೊಡಗುತ್ತಿತ್ತು. ಮಾತಾಡುತ್ತಿದ್ದ ಹಾಗೇ, ನಾನು ಅವನನ್ನು ಕಣ್ಣಲ್ಲೇ ಇಡೀ ಅಳತೆ ಮಾಡಿದೆ: ಅವನು ಸಣ್ಣಗೆ ತೆಳ್ಳಗಿದ್ದ, ಆಗಾಗ ಕೆಮ್ಮುತ್ತಿದ್ದ. ಹಾಗೇ ನಾನು ನೆಲಕ್ಕುರುಳಿ ಅವನೆದುರು ಅಂಗಲಾಚುತ್ತಲೇ ಅವನ ಮೊಳಕಾಲು ಹಿಡಿದುಕೊಂಡೆ, ಮತ್ತೊಂದು ಕ್ಷಣದಲ್ಲಿ ಗಟ್ಟಿಯಾಗಿ ಒಂದು ಸಲ ಕಾಲು ಎಳೆದು ಅವನನ್ನು ನೆಲಕ್ಕುರುಳಿಸಿದೆ. ಅವನು ಕೆಸರಲ್ಲಿ ಉರುಳಿದ. ತಕ್ಷಣವೇ ನಾನು ಅವನ ಮುಖ ತಿರುಗಿಸಿ ಅದನ್ನು ಕೆಸರಲ್ಲಿ ಒತ್ತಿದೆ, ಮತ್ತೆ

ಲ್ಲಾದರೂ ಕೂಗಿಕೊಳ್ಳುವುದಕ್ಕೆ ಪ್ರಾರಂಭಿಸಿಬಿಟ್ಟಾನು ಎಂದು. ಅವನು ಕೂಗಲಿಲ್ಲ, ಆದರೆ ನನ್ನನ್ನು ತನ್ನ ಬೆನ್ನಿನಿಂದ ಎತ್ತಿ ಎಸೆಯಲು ಹೆಣಗಾಡಿದ. ನಾನು ಎರಡೂ ಕೈಗಳಲ್ಲಿ ಅವನ ಮುಖ ಹಿಡಿದು ಅದನ್ನು ಕೆಸರಿನಲ್ಲಿ ಮತ್ತಷ್ಟು ಹುಗಿದೆ. ಅವನು ಉಸಿರು ಕಟ್ಟಿ ಒದ್ದಾಡ ತೊಡಗಿದ. ಅಲ್ಲಿಂದ ನಾನು ಪೋಲಂಡಿನವರನ್ನಿಟ್ಟಿದ್ದ ಆ ಸೆರೆಯಂಗಳದ ಕಡೆ ಧಾವಿಸಿದೆ. 'ಆರ್ಕಡೆಕ್ !'—ನಾನು ಆ ಗೋಡೆಯಲ್ಲಿದ್ದ ಒಂದು ಪಡಕಿನಲ್ಲಿ ಮುಖ ವಿಟ್ಟು ಪಿಸುದನಿಯಲ್ಲೆ ಕೂಗಿದೆ. ಆ ಜನ, ಪೋಲಂಡಿನ ಮಂದಿ, ಕಪಟ ತಂತ್ರಿಗಳು ; ನನ್ನ ಕೂಗು ಕೇಳಿದರೂ ಅವರು ಹಾಡು ನಿಲ್ಲಿಸಲಿಲ್ಲ. ಆದರೆ ಅಷ್ಟರಲ್ಲಿ ಪಡಕಿನ ಆ ಕಡೆ ಅವನ ಕಣ್ಣುಗಳು ನನಗೆ ನೇರ ಎದುರಾಗಿ ಕಂಡವು. "ನೀನು ಇಲ್ಲಿಂದ ಹೊರಗೆ ಬಂದು ಬಿಡಬಹುದಲ್ಲ" ಎಂದೆ ನಾನು. "ಈ ಗೋಡೆಯ ಕೆಳಗಿಂದ ಬರುವುದಕ್ಕಾಗುತ್ತದೆ" ಎಂದ ಅವನು. "ಹಾಗಿದ್ದರೆ ಬೇಗ ಬಂದುಬಿಡು" ಎಂದೆ. ನನ್ನ ಆರ್ಕಡೆಕ್‌ನೂ ಕೂಡಿ ಒಟ್ಟು ನಾಲ್ಕು ಜನ ಆ ಸೆರೆಯಂಗಳದಿಂದ ನುಸುಳಿಕೊಂಡು ಹೊರಬಂದರು. "ಕಾವಲುಗಾರ ಎಲ್ಲಿದ್ದಾನೆ ?" ಆರ್ಕಡೆಕ್ ಕೇಳಿದ. "ಅಲ್ಲಿ ಬಿದ್ದಿದ್ದಾನೆ" ಎಂದೆ. ಅಲ್ಲಿಂದ ಮೆಲ್ಲಗೆ ಅಂಬೆಗಾಲಿಕ್ಕುತ್ತ ತೆವಳಿದೆವು—ಸದ್ದಿಲ್ಲದೆ, ಬಿಲ್ಲಿನ ಹಾಗೆ ಇಡೀ ಬಗ್ಗಿಕೊಂಡು. ಮಳೆ ಸುರಿಯುತ್ತಲೇ ಇತ್ತು, ಗಾಳಿ ಪೀಡಿಸುತ್ತಿತ್ತು. ಆ ಊರಿನ ತುದಿ ಸೇರಿಯಾದ ಮೇಲೆ ಮುಂದೆ ಕಾಡಿನ ದಾರಿಯಲ್ಲಿ, ಬಹಳ ಹೊತ್ತು ಯಾರೂ ಏನೂ ಮಾತಾಡದೆ ನಡೆದೆವು. ವೇಗವಾಗಿ ನಡೆಯುತ್ತಿದ್ದೆವು. ಆರ್ಕಡೆಕ್ ತನ್ನ ಕೈಯಲ್ಲಿ ನನ್ನ ಕೈ ಹಿಡಿದುಕೊಂಡಿದ್ದ. ಅವನ ಕೈ ಬಿಸಿಯೇರಿ ನಡುಗುತ್ತಿತ್ತು. ಓಹ್, ಹಾಗೆ ಅವನ ಪಕ್ಕದಲ್ಲೆ ಕೈ ಹಿಡಿದು ನಡೆಯುವುದು ಎಷ್ಟು ಹಿತವಾಗಿತ್ತು, ಅವನು ಬಾಯಿ ಮಾತ್ರ ಬಿಚ್ಚದೆ ಇದ್ದಿದ್ದರೆ. ಅವೇ ನನ್ನ ಕೊನೆಯ ಕ್ಷಣಗಳಾಗಿದ್ದವು, ನನ್ನ ತೃಪ್ತಿಕಾಣದ ಬಕಾಸುರ ಬದುಕಿನ ಕೊನೆಯ ಹರ್ಷದ ಕ್ಷಣಗಳು. ಹಾಗೇ ನಡೆದು ಅಂತೂ ಕೊನೆಗೆ ಒಂದು ಹುಲ್ಲುಗಾವಲಿಗೆ ಬಂದು ಸೇರಿದೆವು ; ಅಲ್ಲಿ ನಿಂತೆವು. ಇಷ್ಟು ಮಾಡಿದ್ದಕ್ಕಾಗಿ ನನಗೆ ಆ ನಾಲ್ಕು ಜನ ಕೃತಜ್ಞತೆ ಹೇಳಿದರು. ಅವರು ಮಾತಾಡಿಯೇ ಆಡಿದರು, ಇವರು ಮಾತು ನಿಲ್ಲಿಸುವುದೇ ಇಲ್ಲವೇನೋ ಎನ್ನುವ ಹಾಗೆ. ಅವರ ಮಾತು ಕೇಳುತ್ತ, ನಾನು ಆರ್ಕಡೆಕ್‌ನನ್ನು ಎವೆ ಕೂಡ ಮುಚ್ಚದೆ ನೋಡುತ್ತಲೇ ಇದ್ದೆ, ಕಣ್ಣಿಗೆ ಹಬ್ಬ ಮಾಡಿಕೊಳ್ಳುತ್ತ. ಈಗ ಇವನು ನನ್ನನ್ನು ಹೇಗೆ ಕಾಣಬಹುದು ? ಅವನು ನನ್ನ ಸುತ್ತ ತನ್ನ ತೋಳು ಸುತ್ತಿ ಒಳ್ಳೇ ವೈಭವದ ಧ್ವನಿಯಲ್ಲಿ ಅದೇನೋ ಹೇಳಿದ, ಏನು ಹೇಳಿದನೋ ಈಗ ನೆನಪಿಲ್ಲ. ಅಂತೂ ತನ್ನನ್ನು ಬಿಡಿಸಿ ತಂದದ್ದಕ್ಕಾಗಿ ತಾನು ನನ್ನನ್ನು ಪ್ರೀತಿಸುತ್ತೇನೆ ಎಂಬ ಅರ್ಥದ ಮಾತನ್ನು ಹೇಳಿದ. ನನ್ನೆದುರು ಮಂಡಿಯೂರಿ ಮುಗುಳು ನಗೆ ಅರಳಿಸಿ "ರಾಣಿ! ನನ್ನ ರಾಣಿ!" ಎಂದು ತೊದಲಿದ. ಥತ್, ಎಂಥ ಸುಳ್ಳು ನಾಯಿ ! ತಡೆಯಲಾಗದೆ ಒದ್ದುಬಿಟ್ಟೆ ನಾನು ; ಇನ್ನೇನು ಕೆನ್ನೆಗೆ ನಾಲ್ಕು ಬಾರಿಸುತ್ತಿದ್ದೆ, ಅಷ್ಟರಲ್ಲಿ ಅವನು ಪಕ್ಕಕ್ಕೆ ಹಾರಿಕೊಂಡು ಎದ್ದುನಿಂತ ಎದುರಿಗೆ, ಮೂತಿ ಊದಿಸಿಕೊಂಡು,

ಮುಖ ಬಿಳಿಚಿಹೋಗಿ. ಉಳಿದ ಮೂವರೂ ಅಲ್ಲೆ ನಿಂತಿದ್ದರು, ಮಾತಿಲ್ಲದೆ ಗಂಭೀರವಾಗಿ. ಅವರೆಲ್ಲರನ್ನು ನಾನು ದುರುಗುಟ್ಟಿ ನೋಡಿದೆ. ಆ ಕ್ಷಣದಲ್ಲಿ, ಈಗ ಕೂಡ ನನಗೆ ಚೆನ್ನಾಗಿ ನೆನಪಾಗುತ್ತದೆ, ನನ್ನ ಮೇಲೆ ಭೂಮಿ ಭಾರದ ಆಯಾಸ ಹಾಗೂ ಔದಾಸೀನ್ಯಗಳು ಬಂದು ಕವಿದಿದ್ದವು. ನಾನು ಹೇಳಿದೆ, "ಹುಂ. ಇನ್ನು ನಿಮ್ಮ ಹಾದಿ ಹಿಡಿದು ನಡೆಯಿರಿ!" ಅವರು ಆ ನಾಯಿಗಳು, ತಿರುಗಿ ಏನು ಹೇಳಿದರು ಗೊತ್ತೆ?—"ನೀನು ಹಿಂದಕ್ಕೆ ಹೋಗಿ ಅವರಿಗೆ ವರದಿ ಒಪ್ಪಿಸಬೇಕೇನೋ, ನಾವು ಯಾವ ದಿಕ್ಕಿನಲ್ಲಿ ಹೋದೆವು ಎಂಬುದನ್ನು!" ಅಂಥ ಪಶುಗಳು ಅವು. ಅಲ್ಲಿಂದಂತೂ ತೊಲಗಿದವು ಅವು. ನಾನೂ ಅಲ್ಲಿಂದ ಹೊರಟೆ. ಮಾರನೆಯ ದಿನ ನಿಮ್ಮ ಸೈನಿಕರು ನನ್ನನ್ನು ಸೆರೆ ಹಿಡಿದರು, ಆದರೆ ಹೆಚ್ಚು ಕಾಲ ಇಟ್ಟುಕೊಳ್ಳದೆ ಬಿಟ್ಟುಬಿಟ್ಟರು. ಆಗ ನನಗೆ ಅರಿವಾಯಿತು—ಇನ್ನಾದರೂ ನನಗೊಂದು ಮನೆ ಮಾಡಿಕೊಳ್ಳಬೇಕು, ಆ ಕಾಲ ಬಂದಿದೆ ಎಂದು. ಕೋಗಿಲೆಯ ಕಾಲ ಸಂದುಹೋಗಿತ್ತು. ಈಗ ಅದು ಭೂತವಷ್ಟೇ ಆಗಿತ್ತು. ನನ್ನ ದೇಹ ಭಾರವಾಗಿತ್ತು, ರೆಕ್ಕೆಗಳು ಸೋತಿದ್ದವು, ಗರಿ ಮುದುರುತ್ತಿದ್ದವು. ನಾನು ವಯಸ್ಸಾದವಳು, ನಿಜ, ವಯಸ್ಸಾದವಳಾಗಿದ್ದೆ. ಅಲ್ಲಿಂದ ನಾನು ಗಲಿಸಿಯಾಕ್ಕೆ, ಮತ್ತೆ ಅಲ್ಲಿಂದ ದೊಬ್ರುಜಾಕ್ಕೆ ಹೋದೆ. ಕಳೆದ ಮೂವತ್ತು ವರ್ಷಗಳಿಂದ ನಾನು ಇಲ್ಲೇ ಬದುಕುತ್ತಿದ್ದೇನೆ. ನನಗೆ ಒಬ್ಬ ಗಂಡನೂ ಇದ್ದ, ಮಾಲ್ಡ್ವಿಯಾದವನು. ಅವನು ಸುಮಾರು ವರ್ಷದ ಹಿಂದೆ ತೀರಿಕೊಂಡ. ನಾನಂತೂ ಬದುಕುತ್ತಲೇ ಇದ್ದೇನೆ, ಏಕಾಕಿಯಾಗಿ...... ಏಕಾಕಿಯಾಗಿ ಎಂದೂ ಹೇಳಲಾರೆ ಅನ್ನು, ಅವರ ಜೊತೆ ಬದುಕುತ್ತಿದ್ದೇನಲ್ಲ!.... .... "ಆ ಮುದುಕಿ ಸಮುದ್ರದ ಅಲೆಗಳ ಕಡೆ ಬೆಟ್ಟು ಮಾಡಿದಳು. ಅವು ಈಗ ಶಾಂತವಾಗಿದ್ದವು. ಆಗೀಗ ಒಮ್ಮೊಮ್ಮೆ ಸದ್ದೇಳುತ್ತಿತ್ತು, ಮತ್ತೆ ಅಷ್ಟರಲ್ಲೆ ಕ್ಷಯಿಸಿ ಹೋಗುತ್ತಿತ್ತು.

"ಅವಕ್ಕೆ ನನ್ನ ಬಗ್ಗೆ ಪ್ರೀತಿ. ನಾನು ಅವುಗಳಿಗೆ ತುಂಬಾ ಕಥೆಗಳನ್ನು ಹೇಳುತ್ತೇನೆ. ಆ ಕಥೆಗಳೆಂದರೆ ಅವಕ್ಕೂ ಆಸೆ. ಅವು ಅಷ್ಟು ಎಳೆಯುವು! ಅವುಗಳ ಜೊತೆಯೇ ನನಗೆ ಬಹಳ ಹರ್ಷ.......ಆದರೆ ನನ್ನ ಕಾಲದಲ್ಲಿ ಜನಕ್ಕೆ ಹೆಚ್ಚು ಶಕ್ತಿಯಿತ್ತು, ಬದುಕಿನಲ್ಲಿ ಬೆಂಕಿಯಿತ್ತು. ಅದಕ್ಕಾಗಿ ಬದುಕು ಉಲ್ಲಾಸದ್ದಾಗಿತ್ತು. ಬೇಕೆನ್ನಿಸುವಂಥದಾಗಿತ್ತು. ವಾಸ್ತವವಾದ ಮಾತು ಇದು."

ಮತ್ತೆ ಆಕೆ ನೀರವಕ್ಕೆ ಮುಗುಂಚಿಕೊಂಡಳು. ಅಲ್ಲಿ ಅವಳ ಬದಿಯಲ್ಲಿ ಕೂತು ನನಗೆ ತುಂಬ ಖೇದವಾಗಿತ್ತು. ಸ್ವಲ್ಪ ಹೊತ್ತಿನಲ್ಲೆ ಅವಳಿಗೆ ಜೊಂಪು ಹತ್ತಿತು, ತಲೆ ತೂಗುತ್ತ ತನ್ನೊಳಗೇ ಉಸಿರಿನಡಿಯಲ್ಲೇ ಏನೋ ಗುಣಗುಣಿಸುತ್ತಿದ್ದಳು: ಪ್ರಾರ್ಥನೆ ಇದ್ದೀತು ಬಹುಶಃ.

## ೩ ಜ್ವಲಂತ ಹೃದಯ

ಪರ್ವತಪಂಕ್ತಿಯ ಹಾಗೆ ಅಲೆಯಲೆ ಏರುತಗ್ಗುಗಳಿದ್ದ ಬೃಹದಾಕಾರದ ಮೇಘ ಪಂಕ್ತಿಯೊಂದು ಸಾವಧಾನವಾಗಿ ಸಮುದ್ರದಿಂದ ಮೇಲಕ್ಕೆದ್ದು ಹುಲ್ಲುಗಾವಲಿನ ಕಡೆ ಸಾಗತೊಡಗಿತು. ಸ್ವಲ್ಪ ಹೊತ್ತು ಅದರ ಮೇಲು ತುದಿಯು ಒಂದು ಕುಡಿ ಹರಿದು ಕೊಂಡು ತಾನೇ ಮುಂದಾಗಿ ಓಡುವುದಕ್ಕೆ ತೊಡಗಿತು, ಒಂದೊಂದಾಗಿ ನಕ್ಷತ್ರಗಳ ಕಣ್ಣು ಮುಚ್ಚುತ್ತ. ಸಮುದ್ರ ಮೆಲ್ಲಗೆ ಗೊಣಗಲು ಪ್ರಾರಂಭಿಸಿತು. ಮುತ್ತಿಕ್ಕುವ, ಪಿಸುಗುಡುವ, ಸುಯ್ಯುವ ಸದ್ದುಗಳು ಅಲ್ಲೇ ಹತ್ತಿರದ ದ್ರಾಕ್ಷಿಯ ಬಳ್ಳಿಮಾಡಗಳಿಂದ ಕೇಳಿಬರತೊಡಗಿತು. ಮುಂದೆ ಹುಲ್ಲುಗಾವಲಲ್ಲಿ ಒಂದು ನಾಯಿ ಊಳಿಡುತ್ತಿತ್ತು. ಗಾಳಿ ಒಂದು ವಿಚಿತ್ರ ಗಂಧದಿಂದ ತುಂಬಿಹೋಗಿತ್ತು, ಮೂಗು ಚುಚ್ಚುವ ಹಾಗೆ, ನರನಾಡಿ ಗಳಲ್ಲಿ ಕಿಣಿಗುಟ್ಟುವ ಹಾಗೆ. ಮೋಡಗಳಿಂದ ನೆಲಕ್ಕೆರಗಿದ ನೆಳಲುಗಳು ಅಲ್ಲಿ ಉದ್ದಗಲ ಎಲ್ಲೆಲ್ಲೂ ಅಲೆಯ ತೊಡಗಿದ್ದವು, ಒಮ್ಮೊಮ್ಮೆ ಕ್ಷೀಣವಾಗಿ ಆಕಾರಹೀನವಾಗಿ, ಒಮ್ಮೊಮ್ಮೆ ಸ್ಪಷ್ಟ ಆಕೃತಿಯಾಗಿ. ಚಂದ್ರ ಮುಂಕು ಬೆಳಕಿನ ಅವಶೇಷವಷ್ಟೇ ಆಗಿ ಉಳಿದಿದ್ದ, ಆ ಅವಶೇಷ ಕೂಡ ಆಗಾಗ ತುಣುಕು ಮೋಡದಿಂದ ಮುಚ್ಚಿಹೋಗು ತ್ತಿತ್ತು. ದೂರದ ಹುಲ್ಲುಗಾವಲು ಕಾವಳ ಕವಿದು ಕಣ್ಣಿಗೆ ತಗ್ಗಿ ಹೋಗಿತ್ತು, ಏನೋ ಭಯಾನಕವಾದ್ದು ಅಡಗಿ ಕೂತಿದೆಯೋ ಎನ್ನುವ ಹಾಗೆ ನೀಲಿ ಬೆಳಕುಗಳು ಅಲ್ಲಲ್ಲಿ ಚಲಿಸುತ್ತಿದ್ದವು. ದೀಪಗಳು ಒಂದೊಂದು ಸಲ ಭುಗ್ಗನೆ ಹೊತ್ತಿದಂತೆ ಕಾಣುತ್ತಿದ್ದವು, ಆ ಹುಲ್ಲುಗಾವಲಲ್ಲಿ ಜನ ಏನನ್ನೋ ಹುಡುಕುತ್ತಿರಬೇಕು ಎನ್ನುವಂತೆ, ಬೆಂಕಿ ಕೆರೆದ ಹಾಗೆ ಕಾಣುತ್ತಿತ್ತು, ಮತ್ತೆ ಗಾಳಿಗೆ ಆರಿದ ಹಾಗೆ ಕಾಣುತ್ತಿತ್ತು. ತುಂಬ ವಿಚಿತ್ರ ಕಾಣುತ್ತಿದ್ದವು ಆ ನೀಲಿ ಬೆಳಕುಗಳು, ಏನೋ ಅದ್ಭುತರಮ್ಯವನ್ನು ಬಿಚ್ಚುವ ಹಾಗೆ.

"ಅಲ್ಲಿ ಮುಂದೆ ಯಾವುದಾದರೂ ನೀಲಿ ಕಿಡಿಗಳು ಕಾಣುತ್ತವೇನು ನಿನಗೆ ?"— ಇಸರ್ಜಿಲ್ ಕೇಳಿದಳು.

"ಆ ಪುಟ್ಟ ನೀಲಿ ಬೆಳಕುಗಳು.........", ಹುಲ್ಲುಗಾವಲಿನ ಕಡೆ ತೋರಿಸಿ ನಾನು ಹೇಳಿದೆ.

"ನೀಲಿ ?—ಹೌದು, ಅದೇ ಪುಟ್ಟ ಪುಟ್ಟ ಬೆಳಕುಗಳು. ಹಾಗಾದರೆ ಅವು ಈಗಲೂ ಕಾಣುತ್ತವೆ ಅನ್ನು ! ಆದರೆ ನನಗಂತೂ ಕಾಣುವುದಿಲ್ಲ. ಅದು ಮಾತ್ರವೇನು, ಎಷ್ಟೋ ಕಾಣಿಸುವುದಿಲ್ಲ ಈಗ ನನಗೆ."

"ಆ ಬೆಳಕು ಎಲ್ಲಿಂದ ಬರುತ್ತವೆ ?"—ನಾನು ಆ ಮುದುಕಿಯನ್ನು ಪ್ರಶ್ನಿಸಿದೆ.

ಆ ಬೆಳಕುಗಳ ಬಗ್ಗೆ ಯಾರೋ ವಿವರಣೆ ಹೇಳಿದ್ದನ್ನು ಆ ಮೊದಲೇ ಕೇಳಿದ್ದೆ ನಾನು. ಆದರೆ ಈ ಮುದುಕಿ ಏನು ಹೇಳುತ್ತಾಳೋ ಕೇಳುವ ಆಸೆಯಾಯಿತು.

"ಆ ಕಿಡಿಗಳು ಡಾಂಕೋವಿನ ಜ್ವಲಂತ ಹೃದಯದಿಂದ ಹೊರಡುತ್ತವೆ," ಆಕೆ ಪ್ರಾರಂಭಿಸಿದಳು : "ಒಂದಾನೊಂದು ಕಾಲದಲ್ಲಿ, ಹಿಂದೆ ನಡೆದ ಕಥೆ ಅದು......ಆಗ ಒಂದು ಎದೆ ಒಡೆದು ಜ್ವಲಂತವಾಗಿ ಉರಿಯಲು ಪ್ರಾರಂಭಿಸಿತು.......ಇದೂ ಕೂಡಾ ಒಂದು ಪುರಾತನ ಕಥೆ...........ಹಳೆಯದು. ಎಲ್ಲವೂ ಹಳೆಯವು ! ಹಿಂದಿನ ಕಾಲದಲ್ಲಿ ಎಂಥೆಂಥಾ ಆಶ್ಚರ್ಯಗಳು ನಡೆದವು ! ಈಗ ಅಂಥ ಘಟನೆಗಳು ನಡೆಯುವುದೇ ಇಲ್ಲ.........ಈಗ ಅಂಥ ಅದ್ಭುತ ಘಟನೆಗಳೂ ಇಲ್ಲ..........ಅಂಥ ಮನುಷ್ಯರೂ ಇಲ್ಲ, ಅಂಥ ಕಥೆಗಳೂ ಇಲ್ಲ !.......ಏಕೆ ? .......ಹಾಗಾದರೆ, ಎಲ್ಲಿ, ಹೇಳು....... ನನಗೆ ಗೊತ್ತು, ನೀನು ಹೇಳಲಾರೆ !........ನಿನಗೆ ಏನು ತಿಳಿದಿದೆ ? ಈಗಿನ ಹೊಸ ಹುಡುಗರಿಗೆ ಏನು ತಿಳಿದಿರುತ್ತದೆ ?......ನೀವು ನಿಮ್ಮ ಹಿಂದಿನದನ್ನು ಚೆನ್ನಾಗಿ ತಿಳಿದುಕೊಂಡಿದ್ದರೆ, ನಿಮ್ಮ ಈಗಿನ ಸಮಸ್ಯೆಗಳಿಗೂ ಉತ್ತರ ಸಿಗುತ್ತಿತ್ತು. ಆದರೆ ನೀವು ಹಿಂದಕ್ಕೆ ತಿರುಗುವುದಿಲ್ಲ. ಅದಕ್ಕೇ ನಿಮಗೆ ಹೇಗೆ ಬದುಕಬೇಕೆಂದೂ ತಿಳಿಯುವುದಿಲ್ಲ .......ನಾನು ನೋಡುತ್ತಿಲ್ಲವೆ, ಜನ ಹೇಗೆ ಬದುಕುತ್ತಿದ್ದಾರೆಂದು ? ನನ್ನ ಕಣ್ಣುಗಳು ಮೊದಲಿನಷ್ಟು ಸೂಕ್ಷ್ಮವಾಗಿಲ್ಲದಿದ್ದರೂ ನಾನು ಎಲ್ಲವನ್ನೂ ತಿಳಿದುಕೊಳ್ಳುತ್ತೇನೆ ! ಜನ ಈಗ ನಿಜವಾಗಿ ಬದುಕುತ್ತಿಲ್ಲ, ಹುಳಗಳಂತೆ ಒದ್ದಾಡುತ್ತಿದ್ದಾರೆ ; ಅದರಲ್ಲಿಯೇ ತಮ್ಮ ಬದುಕನ್ನೆಲ್ಲ ಸವೆಸಿಬಿಡುತ್ತಾರೆ. ತಾವು ಪಡೆಯಬಹುದಾದ ಎಲ್ಲ ಸವಿಗಳಿಂದಲೂ ವಂಚಿತರಾಗಿ, ತಮ್ಮ ಕಾಲವನ್ನೆಲ್ಲಾ ವ್ಯರ್ಥಮಾಡಿಕೊಂಡು ಆಮೇಲೆ ತಮ್ಮ ಅದೃಷ್ಟ ವನ್ನು ಹಳಿಯುತ್ತ ಕೂತುಬಿಡುತ್ತಾರೆ. ಅದೃಷ್ಟ ಏನು ಮಾಡುತ್ತದೆ ? ಪ್ರತಿ ಯೊಬ್ಬನೂ ತನ್ನ ಅದೃಷ್ಟವನ್ನು ತಾನೇ ನಿರ್ಮಿಸಿಕೊಳ್ಳುತ್ತಾನೆ ! ಈ ಕಾಲದಲ್ಲಿ ಎಷ್ಟು ವಿಧದ ಜನ ಕಾಣಸಿಗುತ್ತಾರೆ ; ಆದರೆ ಬಲಶಾಲಿಗಳು ಮಾತ್ರ ಒಬ್ಬರೂ ಇಲ್ಲ ! ಅವರಿಗೆಲ್ಲ ಏನಾಗಿ ಹೋಯಿತೋ ಏನೋ !......ಅದಕ್ಕೇ ಜನ ಈಗ ಚೆಲುವಾಗಿಯೂ ಇರುವುದಿಲ್ಲ !"

ಮುದುಕಿ ಮತ್ತೆ ಮೌನವಾದಳು. ಆ ಜನಗಳ ಬಲ, ಚೆಲುವು, ಈಗ ಏನಾಗಿ ಹೋಯಿತೆಂದು ಯೋಚಿಸುತ್ತಾ ಅದರಲ್ಲೇ ಮುಳುಗಿಹೋದಳೋ ಏನೋ. ಕಪ್ಪು

ತುಂಬಿದ ಹುಲ್ಲುಗಾವಲಿನ ಕಡೆ ದೃಷ್ಟಿ ಹಾಯಿಸಿದಳು, ಅಲ್ಲಿಯಾದರೂ ತನ್ನ ಸಮಸ್ಯೆಗೆ ಉತ್ತರ ದೊರೆಯಬಹುದೇ ನೋಡುವುದಕ್ಕೆ.

ನಾನು ಕಥೆಯನ್ನು ಕೇಳುವ ಸಲುವಾಗಿ ಸುಮ್ಮನೆ ಕುಳಿತುಕೊಂಡೆ. ನಾನೇ ಮತ್ತೆ ಪ್ರಶ್ನೆ ಮಾಡಿದರೆ ಆಕೆ ಹೀಗೆ ಎತ್ತೆತ್ತಲೋ ಮಾತು ಬೆಳೆಸುತ್ತ ಹಾದಿ ತಪ್ಪುತ್ತಾಳೆಂಬ ಹೆದರಿಕೆಯಿಂದ ಮಾತಾಡಲಿಲ್ಲ.

ಕೊನೆಗೊಮ್ಮೆ ಆಕೆ ಮೌನವನ್ನು ಮುರಿದಳು ; ಕಥೆಯನ್ನು ಹೇಳಲು ಶುರು ಮಾಡಿದಳು :

"ಬಹಳ ದಿನಗಳ ಹಿಂದೆ, ಒಂದಾನೊಂದು ಕಾಲದಲ್ಲಿ ವಿಶಾಲವಾಗಿದ್ದ ಒಂದು ಹುಲ್ಲುಗಾವಲಲ್ಲಿ ಒಂದು ಜನಾಂಗ ವಾಸಮಾಡುತ್ತಿತ್ತು. ಆ ಹುಲ್ಲುಗಾವಲಿನ ಸುತ್ತಲೂ ಮೂರು ದಿಕ್ಕಿನಲ್ಲಿ ದಟ್ಟವಾಗಿದ್ದ ಭಯಂಕರ ಗೊಂಡಾರಣ್ಯ ಕವಿದುಕೊಂಡಿತ್ತು. ಆ ಜನರು ತುಂಬಾ ಶೂರರಾಗಿದ್ದರು ; ನಿಶ್ಚಿಂತೆಯಿಂದ ಜೀವನ ನಡೆಸುತ್ತಿದ್ದರು. ಹೀಗೇ ಇರುತ್ತಿರುವಾಗ ಒಮ್ಮೆ ದುರದೃಷ್ಟದಿಂದ, ಇವರ ಬದ್ಧ ವೈರಿಗಳಾಗಿದ್ದ ಇನ್ನೊಂದು ಜನಾಂಗದವರು ಒಂದು ದಿನ ಇದ್ದಕ್ಕಿದ್ದ ಹಾಗೇ ಇವರ ಮೇಲೆ ಬಂದು ಎರಗಿದರು, ಇವರನ್ನು ದಟ್ಟವಾಗಿದ್ದ ಗೊಂಡಾರಣ್ಯದೊಳಕ್ಕೆ ಅಟ್ಟಿಬಿಟ್ಟರು.

"ಆ ಅರಣ್ಯದಲ್ಲಿ ಎಲ್ಲೆಲ್ಲೂ ದಟ್ಟವಾದ ಕತ್ತಲು, ಜೌಗು ಉಕ್ಕುವ ನೆಲ. ಅಲ್ಲಿನ ಸನಾತನ ವೃಕ್ಷಗಳು ಮುಗಿಲಿನ ಎತ್ತರಕ್ಕೆ ಬೆಳೆದು ನಿಂತಿದ್ದವು. ಅವುಗಳ ಬೃಹದಾಕಾರದ ಕೊಂಬೆಗಳು ಒಂದಕ್ಕೊಂದು ಹೆಣೆದುಕೊಂಡಿದ್ದವು. ಆದರಿಂದ, ಆ ದಟ್ಟವಾದ ಎಲೆಗಳ ಬಲೆ ಆಕಾಶವನ್ನೇ ಮುಚ್ಚಿಬಿಟ್ಟಿತ್ತು. ಸೂರ್ಯನ ಕಿರಣಗಳು ಆ ಹೆಣಿಕೆಯೊಳಗಿಂದ ತೂರಿಬಂದು ನೆಲವನ್ನು ಸೇರುವ ಹಾಗೇ ಇರಲಿಲ್ಲ. ಒಮ್ಮೊಮ್ಮೆ ಎಲ್ಲಾದರೂ ಅಲ್ಲಿ ಇಲ್ಲಿ ಬೆಳಕು ನುಗ್ಗಿ ಬಂದು ನೆಲವನ್ನು ತಾಕಿದರೂ ಭೂಮಿಯಿಂದ ತಡೆಯಲಾಗದ ಹೊಲಸು ನಾತ ಹುಟ್ಟಿ, ಅದರಿಂದ ಸುತ್ತುಮುತ್ತಲಿದ್ದ ಜನರೆಲ್ಲ ಸತ್ತುಹೋಗುತ್ತಿದ್ದರು. ಆ ಗುಂಪಿನ ಹೆಂಗಸರು ಒಂದೇ ಸಮ ಅಳಲು ತೊಡಗಿದ್ದರು. ಗಂಡಸರು ಎದೆಯೊಡೆದು ಕೂತುಬಿಟ್ಟಿದ್ದರು. ತಾವು ಉಳಿಯಬೇಕೆಂದಿದ್ದರೆ ಆ ಕಾಡನ್ನು ಬಿಟ್ಟು ಹೋಗಬೇಕು, ಅದಲ್ಲದೆ ಬೇರೆ ದಾರಿಯೇ ಇಲ್ಲ—ಎಂದು ಅವರು ಅರಿತರು. ಆದರೆ ಹಾಗೆ ಮಾಡಲು ಅವರಿಗೆ ಇದ್ದದ್ದು ಎರಡೇ ಮಾರ್ಗ: ಒಂದು, ಮತ್ತೆ ಹಿಂತಿರುಗಿ ತಾವು ಇದ್ದಲ್ಲಿಗೇ ಹೋಗುವುದು. ಅಲ್ಲಿ, ಬಲಶಾಲಿಗಳಾದ ಅದೇ ಕ್ರೂರ ಶತ್ರುಗಳನ್ನು ಮತ್ತೆ ಎದುರಿಸ ಬೇಕಾಗಿತ್ತು. ಇನ್ನೊಂದು, ಎದುರು ದಿಕ್ಕಿನಲ್ಲೇ ಮುಂದುವರಿದು ಕಾಡನ್ನು ದಾಟಿ ಹೋಗಿ ಬೇರೆಲ್ಲಾದರೂ ನೆಲೆಸಬೇಕಿತ್ತು. ಆದರೆ ಅಲ್ಲಿ ರಾಕ್ಷಸವೃಕ್ಷಗಳು ಕೊಂಬೆಗಳನ್ನು ಬಿಗಿದು ಹಾದಿ ಕೊಡದೆ ನಿಂತಿದ್ದವು! ಆ ಜಿಗುಟು ನೆಲದಲ್ಲಿ ಅವುಗಳ ಬೇರುಗಳು ಆಳ ವಾಗಿ ಇಳಿದು ಕಚ್ಚಿಕೊಂಡಿದ್ದವು. ಹೀಗಾಗಿ ಆ ದಾರಿ ದುರ್ಭೇದ್ಯವಾಗಿತ್ತು.

"ಆ ಮಹಾವೃಕ್ಷಗಳು ಹಗಲು ಹೊತ್ತಿನ ಮುಸುಕು ಮುಸುಕಾದ ಬೂದು ಬೆಳಕಿನಲ್ಲಿ

ಗಂಭೀರವಾಗಿ ಸದ್ದಿಲ್ಲದೆ ಅಲುಗಾಡದೆ ನಿಂತಿದ್ದುವು; ರಾತ್ರಿಯ ಹೊತ್ತು ಅವರು ಉರಿಸುತ್ತಿದ್ದ ಬೆಂಕಿಯ ಬೆಳಕಿನಲ್ಲಿ ಇನ್ನೂ ಸಮೀಪದಿಂದ ಸುತ್ತುವರಿದು ಆಕ್ರಮಿಸು ತ್ತಿರುವ ಹಾಗೆ ಕಾಣುತ್ತಿದ್ದವು. ಹುಲ್ಲುಗಾವಲಿನ ವಿಶಾಲವಾದ ಬಯಲಲ್ಲಿ ವಾಸಮಾಡಿ ಒಗ್ಗಿದ ಈ ಜನಕ್ಕೆ, ಅಹೋರಾತ್ರಿಯೂ ಕಾಡಿನ ಕಗ್ಗತ್ತಲೆಯಲ್ಲಿ, ದುರ್ನಾತದಲ್ಲಿ ಸಿಕ್ಕಿ ಉಸಿರುಕಟ್ಟಿ ಹೋಗುತ್ತಿರುವಂತೆ ತೋರುತ್ತಿತ್ತು. ಕ್ಷಣಕ್ಷಣವೂ ಅಸಹ್ಯವಾಗು ತ್ತಿತ್ತು. ಭಯಂಕರ ಮರಗಳ ತುದಿಯಲ್ಲಿ ಗಾಳಿ ಬೀಸಿ ಹೋಗುತ್ತಿರುವಾಗ, ಸಾವೇ ಕೂಗುತ್ತಿರುವ ಹಾಗೆ ಅಮಂಗಳಕರವಾದ 'ಗುಂಯ್' ಎಂಬ ಸದ್ದು ಹೊರಟು ಮತ್ತಷ್ಟು ಭಯಂಕರವಾಗುತ್ತಿತ್ತು.

"ಈ ಜನಗಳೆಲ್ಲ ತುಂಬ ಬಿಲಿಷ್ಠರು. ಪುನಃ ಹಿಂತಿರುಗಿ ಹೋಗಿ ತಮ್ಮ ವೈರಿ ಗಳೊಡನೆ ಕಾದಾಡಿ ಅವರನ್ನು ನಾಶಮಾಡಬಹುದಿತ್ತು. ಆದರೆ ಆ ಕಾದಾಟದಲ್ಲಿ ಎಲ್ಲರೂ ಸತ್ತುಹೋದರೆ ಎಂಬ ಸಂಶಯ. ಅವರು ಹಿಂದಿನ ಸಂಪ್ರದಾಯಕ್ಕೆ ಅಂಟಿ ಕೊಂಡವರಾಗಿದ್ದ ಕಾರಣ, ಹಾಗೆ ಸಾಯಲು ಸಿದ್ಧರಿರಲಿಲ್ಲ. ಇವರು ಸತ್ತರೆ ಇವರೊಡನೆ ಬಂದ ಸಂಪ್ರದಾಯವೂ ನಾಶವಾಗಿ ಹೋಗುತ್ತಿರಲಿಲ್ಲವೇ ?

"ಅವರು ಆ ಕಾಡಿನ ನರಳುವಿಕೆಯ ಸದ್ದಿನಲ್ಲಿ ಶಿಬಿರದೆದುರು ಉರಿಸುತ್ತಿದ್ದ ಬೆಂಕಿಯ ಹತ್ತಿರ ಕೂತು, ಇದು ಮುಗಿಯುವುದೇ ಇಲ್ಲ ಎಂದು ತೋರುತ್ತಿದ್ದ ದೀರ್ಘ ರಾತ್ರಿಗಳಲ್ಲಿ, ನೆಲದ ಜೌಗಿನಿಂದ ಉಕ್ಕುವ ವಿಷಗಂಧದಿಂದ ಸರಿಯಾಗಿ ಉಸಿರಾ ಡಲೂ ಆಗದೆ ಗೋಳಿಡುತ್ತಿದ್ದರು. ಆ ಬೆಂಕಿಯ ಸುತ್ತಲೂ ನೆರಳುಗಳು ಮೌನವಾಗಿ ತಕತಕ ಕುಣಿಯುತ್ತಿದ್ದವು. ಆ ನೆರಳುಗಳ ಕುಣಿತವನ್ನು ನೋಡಿದಾಗ ಅವರಿಗೆ ಅವು ಬರಿಯ ನೆರಳುಗಳೇ ಅಲ್ಲವೆಂದು ಎನಿಸುತ್ತಿದ್ದವು. ಕಾಡಿನ ದೆವ್ವಗಳು ಮತ್ತು ನೆಲದಿಂದ ಹೊರಡುವ ದುರ್ಗಂಧ—ಇವುಗಳೇ ನೆರಳಿನ ರೂಪವಾಗಿ ವಿಜಯಮತ್ತತೆಯಿಂದ ಕುಣಿಯಲು ತೊಡಗಿದ್ದಾವೆ ಎಂದು ಭಾಸವಾಗುತ್ತಿದ್ದವು. ಆ ಜನಗಳು ರಾತ್ರಿಯನ್ನೆಲ್ಲ ಇದೇ ಗೋಳಿನ ಚಿಂತೆಯಲ್ಲೇ ಕಳೆಯುತ್ತಿದ್ದರು. ಎಂತಹ ದೈಹಿಕ ಕಷ್ಟವೇ ಆಗಲಿ, ಕೊನೆಗೆ ಹೆಣ್ಣು ಕೂಡ, ಮನುಷ್ಯನ ದೇಹ ಆತ್ಮಗಳನ್ನು ಈ ಚಿಂತೆಯು ಬೆಂಕಿಯ ಹಾಗೆ ಕಠೋರವಾಗಿ ಸುಟ್ಟು ಬೂದಿ ಮಾಡಲಾರದು ಎನ್ನಿಸುತ್ತಿತ್ತು ಅವರಿಗೆ.

"ಹೀಗೆ ಕೊನೆಯಿಲ್ಲದ ದುಸ್ಸಹ ಚಿಂತೆಯಿಂದ ಆ ಜನ ಕೊರಗಿ ಹೋದರು........ ಅವರಲ್ಲಿ ಭಯ ಹುಟ್ಟಿತು. ಅವರ ಉಕ್ಕಿನ ತೋಳುಗಳು ಆ ಭಯದ ಸೆರೆಯಲ್ಲಿ ಸಿಕ್ಕು ಸೊರಗಿದವು. ದುರ್ಗಂಧದಿಂದ ಸತ್ತವರ ದೇಹಗಳ ಮೇಲೆ ಬಿದ್ದು ಗೋಳಾಡುತ್ತ, ಬದುಕಿರುವವರ ಭವಿಷ್ಯದ ಯೋಚನೆಯಲ್ಲಿ ನರಳಿ, ಹೆಂಗಸರೂ ಭಯದ ಕೂಸುಗಳನ್ನೆ ಹೆತ್ತರು. ಆ ಕಾಡಿನಲ್ಲಿ ಎಲ್ಲೆಲ್ಲೂ ಹೇಡಿತನದ ಮಾತುಗಳೇ ಸುಳಿದಾಡತೊಡಗಿದವು— ಮೊದಲು ಮೆಲ್ಲ ಮೆಲ್ಲಗೆ ಅಂಜಿಕೆಯಿಂದ......ಕೊನೆ ಕೊನೆಗೆ ದೊಡ್ಡದಾಗಿ......ಆ ಜನಗಳೆಲ್ಲರೂ ಮತ್ತೆ ವೈರಿಯ ಹತ್ತಿರ ಹೋಗಿ ಅವರ ಕಾಲಿನಡಿಯಲ್ಲಿ ತಮ್ಮ

ಸ್ವಾತಂತ್ರ್ಯವನ್ನು ಕಾಣಿಕೆಯಾಗಿ ಕೊಟ್ಟು ಹೇಗಾದರೂ ಬದುಕಿದರೆ ಸಾಕೆಂದು ಯೋಚಿಸ ತೊಡಗಿದರು. ಸಾವಿನ ಭಯದಿಂದ ಎಲ್ಲರೂ ಗಡಗಡ ನಡುಗಿದರು. ಆದರೆ ದಾಸ್ಯದ ಬಾಳುವೆಗೆ ಮಾತ್ರ ಒಬ್ಬನೂ ಹೆದರಿದಂತೆ ತೋರಲಿಲ್ಲ........ಆ ಹೊತ್ತಿಗೆ ಡಾಂಕೋ ಬಂದು ನಿಸ್ಸಹಾಯಕರಾಗಿ ಕೈಕಟ್ಟಿ ಕೂತಿದ್ದ ಅವರನ್ನು ಬದುಕಿಸಿ ಕಾಪಾಡಿದ."

ಡಾಂಕೋವಿನ ಜ್ವಲಂತ ಹೃದಯದ ಈ ಕಥೆಯನ್ನು ಆ ಮುದುಕಿ ಹಿಂದೆ ಎಷ್ಟೋ ಬಾರಿ ಅನೇಕರಿಗೆ ಹೇಳಿದ್ದಿರಬೇಕು. ಅವಳ ಕಥೆ ತಡೆಯಿಲ್ಲದೆ, ಅಭ್ಯಾಸದಿಂದ ಶ್ರುತಿಗೆ ಹೊಂದಿಕೊಂಡಿರುವ ಸಂಗೀತದ ಹಾಗೆ ಸಾಗುತ್ತಿತ್ತು. ಧ್ವನಿ ಮೃದುವಾಗಿ ಬಿಡಿ ಬಿಡಿಯಾಗಿ ಇದ್ದರೂ ಅಸಹನೀಯವಾಗಿತ್ತು ; ಬೇಟೆಯ ಮೃಗಗಳಂತೆ ಆ ಜನ ಬಲಿಬಿದ್ದು ಸಾಯುತ್ತಿದ್ದ ಜೌಗು ನೆಲದ ವಿಷಗಂಧವೇ ಉಸಿರಾಗಿ ನರಳುತ್ತಿರುವ ಆ ಅರಣ್ಯದ ದುಃಖರೋದನ ಮಾಯೆಯಿಂದ ಇಲ್ಲಿ ಮೈವೆತ್ತು ಬಂದಿರುವ ಹಾಗೆ ಕಾಣುತ್ತಿತ್ತು.

"ಡಾಂಕೋ ಇನ್ನೂ ಪ್ರಾಯ ಉಕ್ಕುತ್ತಿದ್ದ ಯುವಕ. ತುಂಬಾ ಚೆಲುವ. ಸುಂದರವಾಗಿರುವವರು ಯಾವಾಗಲೂ ಧೈರ್ಯಸ್ಥರಾಗಿರುತ್ತಾರೆ. ಅವನು ಬಂದು ಈ ಜನಗಳಿಗೆ ಹೇಳಿದ, 'ನೀವು ಸುಮ್ಮನೆ ಹೀಗೆ ಯೋಚಿಸುತ್ತ ಕೂತರೆ ಹಾದಿಯಲ್ಲಿರುವ ಬಂಡೆ ತಾನಾಗಿ ಉರುಳಿ ಹೋಗುವುದಿಲ್ಲ. ಯಾರು ಏನೂ ಮಾಡುವುದಿಲ್ಲವೋ ಅವರಿಗೆ ಏನೂ ಸಿಕ್ಕುವುದಿಲ್ಲ. ಬರಿಯ ಯೋಚನೆಯಿಂದಲೇ ನಮ್ಮ ಶಕ್ತಿಯನ್ನೇಕೆ ಹಾಳುಮಾಡಿಕೊಳ್ಳುವುದು ?......ಏಳಿ ! ಮೇಲಕ್ಕೇಳಿ ! ಈ ಕಾಡಿನ ಬಸಿರಲ್ಲಿ ನುಗ್ಗಿ ನಮ್ಮ ಹಾದಿಯನ್ನು ಹುಡುಕಿಕೊಳ್ಳೋಣ. ಈ ಕಾಡಿಗೂ ಒಂದು ಕೊನೆಯಿರಬೇಕು. ಜಗತ್ತಿನಲ್ಲಿ ಎಲ್ಲದಕ್ಕೂ ಒಂದು ಕೊನೆಯಿರಬೇಕು. ಜಗತ್ತಿನಲ್ಲಿ ಎಲ್ಲದಕ್ಕೂ ಒಂದು ಕೊನೆ ಇದ್ದೇ ಇರುತ್ತದೆ ! ಬನ್ನಿ ಹೊರಡೋಣ !'

"ಆತನನ್ನು ನೋಡಿದಾಗ ತಮ್ಮೆಲ್ಲರಗೆಲ್ಲ ಬಲಿಷ್ಠನಾದವನು ಇವನೊಬ್ಬನೇ ಎಂದು ಅವರಿಗೆ ತೋರಿತು. ಅವನ ಕಣ್ಣುಗಳಲ್ಲಿ ಬೆಂಕಿಯ ಉರಿ ಕುಣಿಯುತ್ತಿತ್ತು.

"'ಆಗಲಿ ! ನೀನು ನಮ್ಮ ನಾಯಕನಾಗು' ಎಂದರು ಜನ.

ಅವನು ಅವರ ನಾಯಕನಾಗಿ ಮುಂದೆ ಹೊರಟ......."

ಮುದುಕಿ ಮಾತು ನಿಲ್ಲಿಸಿದಳು. ಹಿಂದೆ ವಿಶಾಲವಾಗಿ ಹಬ್ಬಿದ್ದ ಹುಲ್ಲುಗಾವಲನ್ನು ನೋಡತೊಡಗಿದಳು. ಕತ್ತಲೆಯ ಸೆರಗು ಬಯಲನ್ನು ಆವರಿಸಿ ಮುಂಬರಿಯುತ್ತಿತ್ತು. ಅತಿ ದೂರದ ದಿಗಂತದಲ್ಲಿ ಆಗೊಮ್ಮೆ ಈಗೊಮ್ಮೆ ಡಾಂಕೋವಿನ ಜ್ವಲಂತ ಹೃದಯದ ಕಿಡಿಗಳು ಹಾರುತ್ತಲೇ ಇದ್ದವು, ಥಕ್ಕನೆ ಅರಳಿ ಮುಚ್ಚಿಕೊಳ್ಳುವ ನೀಲವರ್ಣದ ಅಗ್ನಿ ಪುಷ್ಪಗಳ ಹಾಗೆ !

"ಡಾಂಕೋ ಅವರನ್ನು ಕರೆದುಕೊಂಡು ಹೊರಟ. ಅವರೆಲ್ಲರೂ ಅವನನ್ನು ಹಿಂಬಾಲಿಸಿದರು. ಎಲ್ಲರಿಗೂ ಅವನಲ್ಲಿ ಸಂಪೂರ್ಣವಾದ ವಿಶ್ವಾಸ ಹುಟ್ಟಿತ್ತು...... ಅದು ಅತಿ ದುರ್ಗಮವಾದ ಮಾರ್ಗ. ಸುತ್ತಲೂ ಕಾಳ ಕತ್ತಲೆ. ಅಲ್ಲಿನ ಜೌಗು ನೆಲದ

ಕೊಳೆ ಮಣ್ಣಿನಲ್ಲಿ ಹೆಜ್ಜೆ ಹೆಜ್ಜೆಗೂ ಜನ ಸಾಯುತ್ತಿದ್ದರು. ಮರಗಳು ಕೊಂಬೆ ಕೊಂಬೆಗೆ ಗಂಟುಹಾಕಿಕೊಂಡು ಕಲ್ಲಿನ ಗೋಡೆಯ ಹಾಗೆ ಅವರ ಹಾದಿಗೆ ಅತಂಕವಾಗಿ ನಿಂತಿದ್ದವು. ಅಂಕು ಡೊಂಕಾದ ಮರದ ಬೇರುಗಳು ಎಲ್ಲೆಲ್ಲೂ ಹಾವಿನಂತೆ ಹರಿದಿದ್ದವು. ಹೆಜ್ಜೆ ಹೆಜ್ಜೆಗೂ ಬೆವರು ಸುರಿಸಿ ನೆತ್ತರು ಚೆಲ್ಲಿ ನಡೆಯಬೇಕಿತ್ತು. ಬಹಳ ದಿನಗಳ ತನಕ ಅವರು ಹೀಗೇ ಹೋರಾಡುತ್ತ ಸಾಗಿದರು..........ಮುಂದೆ ಮುಂದೆ ಹೋದ ಹಾಗೆಲ್ಲ ಅರಣ್ಯ ಇನ್ನೂ ದಟ್ಟವಾಗುತ್ತಿತ್ತು. ಅವರ ಶಕ್ತಿ ಕುಂದುತ್ತ ಬಂತು. ಈ ಹುಡುಗನಿಗೆ ಅನುಭವವಿಲ್ಲ, ನಮ್ಮನ್ನು ಯಾಕಡೆ ಕೊಂಡೊಯ್ಯುತ್ತಿದ್ದೇನೆ ಎಂಬ ಕಲ್ಪನೆಯೂ ಇಲ್ಲ—ಎಂದು ಡಾಂಕೋನನ್ನು ಕುರಿತು ಕೆಲವರು ಗೊಣಗಲಾರಂಭಿಸಿದರು. ಆದರೆ ಡಾಂಕೋ ಇವರೆಲ್ಲರಿಗಿಂತ ಮುಂದೆ ಶಾಂತಚಿತ್ತದಿಂದ ನಗುನಗುತ್ತ ನಡೆಯುತ್ತಿದ್ದ.

ಇದ್ದಕ್ಕಿದ್ದ ಹಾಗೆ ಒಂದು ದಿನ ಆ ಕಾಡಿನಲ್ಲಿ ಪ್ರಚಂಡವಾದ ಬಿರುಗಾಳಿ ಯೆದ್ದಿತು. ಅರಣ್ಯದ ಆ ಪಿಶಾಚ ವೃಕ್ಷಗಳು ತಮ್ಮ ತಮ್ಮಲ್ಲಿಯೇ ಯಾವುದೋ ಅಮಂಗಳವನ್ನು ಪಿಸುಗುಟ್ಟಿಕೊಳ್ಳುತ್ತಿರುವ ಹಾಗೆ ಭಯಾನಕವಾಗಿ ಕಂಡಿತು. ಜಗತ್ತು ಹುಟ್ಟಿದಾಗಿನಿಂದ ಆಗಿ ಹೋದ ಎಲ್ಲಾ ರಾತ್ರಿಗಳೂ ಕೂಡಿಬಂದು ಕವಿಯುತ್ತಿರುವ ಹಾಗೆ ಕಾಣಿಸುತ್ತಿತ್ತು. ಎದೆ ನಡುಗಿಸುವ ಕತ್ತಲು ! ಆ ರಾಕ್ಷಸ ವೃಕ್ಷಗಳ ಮಧ್ಯೆ ಜನರು ತಮ್ಮ ಹಾದಿಯನ್ನು ಹುಡುಕಿಕೊಳ್ಳುತ್ತ ಮುಂದೆ ಮುಂದೆ ಸಾಗುತ್ತಿದ್ದರು. ಮರಗಳು ತಮ್ಮ ಬಲವಾದ ಕೊಂಬೆಗಳನ್ನು ತೂಗುತ್ತ ಕೋಪದಿಂದ ಅಬ್ಬರಿಸುತ್ತಿದ್ದವು. ಪಕ್ಕನೆ ಮಿಂಚು ಹೊಳೆದು ಮರಗಳ ಮೇಲುಭಾಗವನ್ನು ತಾಗಿ ನೀಲಪ್ರಭೆಯನ್ನು ಬೆಳಗಿಸಿ ಮತ್ತೆ ಕ್ಷಣದಲ್ಲಿ ಮಾಯವಾಗುತ್ತಿತ್ತು. ಆ ಮಿಂಚಿನ ಕೋಡು ಬೆಳಕಿನಲ್ಲಿ, ಮರಗಳು ದೀರ್ಘ ಬಾಹುಗಳಿಂದ ಒಂದಕ್ಕೊಂದು ಬಿಗಿಯಾಗಿ ಅಪ್ಪಿಕೊಂಡು ಇವರ ಸುತ್ತಲೂ ದುರ್ಭೇದ್ಯವಾದ ಉಕ್ಕಿನ ತೆರೆಯನ್ನು ನಿರ್ಮಿಸಿ, ಆ ಕತ್ತಲೆಯ ಕೋಟೆಯಲ್ಲಿ ಸೆರೆ ಹಿಡಿಯಲು ಅಣಿಯಾಗುವ ರಾಕ್ಷಸರಂತೆ ತೋರುತ್ತಿದ್ದವು. ರೆಂಬೆ ರೆಂಬೆಗಳ ನಡುವೆ ಅಡಗಿ ಕೂತ ಭಯಾನಕವಾದ ಕತ್ತಲು ಮತ್ತು ಚಳಿ—ಇವರನ್ನೆ ದುರುಗುಟ್ಟಿ ನೋಡುತ್ತಿರುವಂತೆ ಭಾಸವಾಗುತ್ತಿತ್ತು. ಆ ದುರ್ಗಮವಾದ ದಾರಿಯಲ್ಲಿ ನಡೆದು ನಡೆದು ಜನ ಬೇಸರ ಹೊಂದಿದರು, ಎದೆಗುಂದಿದರು. ಆದರೂ ತಮ್ಮ ದೌರ್ಬಲ್ಯವನ್ನು ಒಪ್ಪಿಕೊಳ್ಳಲು ಅವರಿಗೆ ನಾಚಿಕೆಯಾಯಿತು. ತಮ್ಮ ಕೋಪವನ್ನು ಎದುರಿನಲ್ಲಿ ಮುಂದಾಳಾಗಿ ನಡೆಯುತ್ತಿದ್ದ ಡಾಂಕೋವಿನ ಮೇಲೆ ಸುರಿಸಿದರು. ತಮ್ಮನ್ನು ಹೇಗೆ ಕರೆದುಕೊಂಡುಹೋಗಬೇಕು—ಎಂಬುದೇ ಆತನಿಗೆ ತಿಳಿಯದೆಂದು ದೂರಲಾರಂಭಿಸಿದರು....

"ಆ ಗೊಂಡಾರಣ್ಯದ ಅಮಂಗಳ ಸ್ವರದ ಅಬ್ಬರದಲ್ಲಿ ಕತ್ತಲಿನ ಮಡುವಿನಲ್ಲಿ ಅವರು ನಿಂತುಬಿಟ್ಟರು, ಬಳಲಿಕೆಯ ಕೋಪದಿಂದ ಡಾಂಕೋನನ್ನು ಕರೆದು ಕಿರುಚಿದರು :

"'ನೀನು ನೀಚ!'—ಅವರೆಲ್ಲ ಕೋಪದಿಂದ ಉರಿಯುತ್ತಿದ್ದರು—'ನೀನೇ ನಮ್ಮ ಕಷ್ಟಗಳಿಗೆಲ್ಲ ಮೂಲವಾಗಿದ್ದೀಯೆ. ನಮ್ಮನ್ನು ಇಲ್ಲಿಗೆ ಕರೆತಂದು ಸವೆಸಿಹಾಕಿದ್ದೀಯೆ. ಅದಕ್ಕಾಗಿ ಈಗ ನೀನೇ ಸಾಯಬೇಕು !'

"ಡಾಂಕೋ ಧೈರ್ಯದಿಂದ ಹೆಮ್ಮೆಯಿಂದ ಅವರನ್ನು ನೋಡಿ ಹೇಳಿದ : 'ನೀವೇ ನನ್ನನ್ನು ನಾಯಕನಾಗುವಂತೆ ಬೇಡಿಕೊಂಡಿರಿ..............ನಿಮ್ಮನ್ನು ಮುಂದಕ್ಕೆ ಕರೆದೊಯ್ಯುವ ಎದೆಗಾರಿಕೆ ನನಗಿದೆ! ಆದ್ದರಿಂದಲೇ ನಿಮ್ಮನ್ನು ಕರೆದು ತಂದಿದ್ದೇನೆ! .......ಆದರೆ ನೀವು ? ನೀವು ಏನು ಮಾಡಿದ್ದೀರಿ ? ಸುಮ್ಮನೆ ನನ್ನ ಹಿಂದೆ ನಡೆದು ಬಂದಿರಿ! ಈ ದೀರ್ಘಯಾತ್ರೆಗೆ ಬೇಕಾಗುವ ಶಕ್ತಿ ನಿಮಗಿಲ್ಲ. ಸುಮ್ಮನೆ ಕುರಿಯ ಮಂದೆಯ ಹಾಗೆ ನನ್ನನ್ನು ಹಿಂಬಾಲಿಸಿ ನಡೆದಿರಿ, ಅಷ್ಟೇ !'

"ಈ ಮಾತುಗಳಿಂದ ಜನರ ಕೋಪ ಮಿತಿಮೀರಿತು.

"'ನೀನು ಸಾಯಬೇಕು ! ನೀನು ಸಾಯಬೇಕು !'—ಅವರೆಲ್ಲ ಒಕ್ಕೊರಲಿನಿಂದ ಕೂಗಿದರು.

"ಕಾಡು ಅವರ ಅಬ್ಬರವನ್ನು ಪ್ರತಿಧ್ವನಿಸಿ ಝೇಂಕರಿಸಿತು. ಮತ್ತೆ ಮಿಂಚು ಹೊಳೆದು ಒಂದು ಕ್ಷಣ ಕತ್ತಲೆಯನ್ನು ಚೂರು ಚೂರು ಮಾಡಿತು. ಡಾಂಕೋ ಒಮ್ಮೆ ಅವರೆಲ್ಲರನ್ನೂ ನೋಡಿದ. ತಾನು ಇಷ್ಟು ಕಷ್ಟಪಟ್ಟುದು ಅವರಿಗಾಗಿ!........ಅವರೆಲ್ಲ ಅವನ ಕಣ್ಣಿಗೆ ಹಸಿವಿನಿಂದ ಹಾತೊರೆಯುತ್ತಿರುವ ಕಾಡುಮೃಗಗಳ ಹಾಗೆ ಕಾಣಿಸಿದರು. ಒಬ್ಬರ ಮುಖದಲ್ಲಿಯೂ ಮನುಷ್ಯತ್ವದ ಚಿಹ್ನೆಯಿರಲಿಲ್ಲ. ಅವರಿಂದ ಕರುಣೆಯ ಕಣವನ್ನೂ ನಿರೀಕ್ಷಿಸುವ ಹಾಗಿರಲಿಲ್ಲ. ಡಾಂಕೋವಿನ ಎದೆಯಲ್ಲಿ ಕೋಪ ಹೊಗೆಯಾಡಿತು. ಆದರೆ ತನ್ನ ಜನಗಳ ಮೇಲಿನ ಪ್ರೇಮದಿಂದ ಮತ್ತೆ ಅದನ್ನು ಅದುಮಿಕೊಂಡ. ಅವನು ಆ ಜನಗಳನ್ನು ತುಂಬ ಪ್ರೀತಿಸುತ್ತಿದ್ದ. ತಾನಿಲ್ಲದೆ ಅವರೆಲ್ಲರೂ ನಾಶವಾಗಿ ಹೋಗುತ್ತಾರೆಂಬುದು ಆತನಿಗೆ ದೃಢವಾಗಿತ್ತು. ಆದ್ದರಿಂದ ಅವರನ್ನು ಉಳಿಸಲು, ಸರಿಯಾದ ಹಾದಿಯಲ್ಲಿ ಕೊಂಡೊಯ್ಯಲು ಆತ ಹಂಬಲಿಸಿ ಹಲುಬಿದ. ಆ ಎಣೆಯಿಲ್ಲದ ಹಂಬಲ ಅವನ ಕಣ್ಣುಗಳಲ್ಲಿ ಕಿಡಿಯಾಗಿ ಉರಿಯುತ್ತಿತ್ತು. ಇದನ್ನು ಕಂಡ ಜನ ಆತನ ಕಣ್ಣುಗಳಲ್ಲಿ ಕೋಪವೇ ಉರಿಯುತ್ತಿರುವುದೆಂದು ತಿಳಿದರು. ಅವನು ಯಾವ ಕ್ಷಣದಲ್ಲಿ ತಮ್ಮ ಮೇಲೆ ಬೀಳುವನೊ ತಾವು ಅದಕ್ಕೆ ಸಿದ್ಧರಾಗಿರಬೇಕು ಎಂದು ತೋಳಗಳ ಹಾಗೆ ಹೋರಾಟಕ್ಕೆ ಅಣಿಯಾಗಿ ನಿಂತರು. ಒಂದು ಕ್ಷಣದಲ್ಲಿ ಅವನನ್ನು ಸುತ್ತುವರಿದು ಕೊಲ್ಲಲು ಸಿದ್ಧರಾದರು. ಅವರ ಹವಣಿಕೆ ಡಾಂಕೋವಿಗೆ ಸ್ಪಷ್ಟವಾಯಿತು. ಅವನಿಗೆ ದುಃಖವುಂಟಾಯಿತು. ದುಃಖದ ಉರಿಯಿಂದ ಆತನ ಹೃದಯ ಕುದಿಯುತ್ತಿತ್ತು......

"ಕಾಡು ಒಂದೇ ಸಮ ದುಃಖದ ಅಪಸ್ವರದಲ್ಲಿ ಝೇಂಗುಟ್ಟುತ್ತಿತ್ತು. ಗುಡುಗು ಮೊರೆಯುತ್ತಿತ್ತು. ಮಳೆ ಓತಪ್ರೋತವಾಗಿ ಸುರಿಯುತ್ತಿತ್ತು.......

"'ಈ ಜನಗಳಿಗೆ ನಾನು ಏನು ಮಾಡಬಲ್ಲೆ ?' ಎಂದು ತನ್ನೊಳಗೇ ಕೂಗಿ

ಕೊಂಡ ಡಾಂಕೋ. ಅವನ ಧ್ವನಿ ಗುಡುಗಿನ ಅಬ್ಬರವನ್ನೂ ಮೀರಿಸಿತು.

"ಒಮ್ಮೆಗೇ ಡಾಂಕೋ ತನ್ನ ಎದೆಯ ಬಳಿ ಕೈಯಿಟ್ಟು, ಉಗುರಿನಿಂದ ಚರ್ಮವನ್ನು ಸೀಳಿ ಹೃದಯವನ್ನು ಕಿತ್ತು ಕೈಯ್ಯಲ್ಲಿ ಕೊಂಡು ತಲೆಯ ಮೇಲೆ ಎತ್ತಿ ಹಿಡಿದು ಕೊಂಡ.

"ಅದು ಸೂರ್ಯನಂತೆ, ಇನ್ನೂ ಜ್ವಲಂತವಾಗಿ ಉರಿಯತೊಡಗಿತು. ಕಾಡಿನ ತುಂಬ ಮೌನ ಆವರಿಸಿತು. ಮಾನವ ಹೃದಯದ ಈ ಪ್ರಚಂಡ ಜ್ಯೋತಿ ಅರಣ್ಯವನ್ನೆಲ್ಲ ತುಂಬಿ ಹರಡಿತು. ಕತ್ತಲೆ, ಈ ಬೆಳಕಿನಿಂದ ದೂರ ದೂರ ಓಡಿಹೋಗಿ ನೆಲದ ಕೆಸರಿನೊಳಕ್ಕೆ ಅವಿತುಕೊಂಡಿತು. ಜನಗಳು ಬೆರಗಿನಿಂದ ಮೂಕರಾಗಿ ಹೋಗಿದ್ದರು.

" 'ನಡೆಯಿರಿ, ಹೋಗೋಣ!'—ಡಾಂಕೋ ಕೂಗಿ ಹೇಳಿದ. ತನ್ನ ಜ್ವಲಂತ ಹೃದಯದ ದಿವ್ಯ ಜ್ಯೋತಿಯಿಂದ ಮಾರ್ಗವನ್ನು ಬೆಳಗುತ್ತ ಮುಂದೆ ನಡೆದ.

"ಆತನ ಗಾರುಡಿಗೆ ಸಿಲುಕಿದವರ ಹಾಗೆ ಜನ ತೆರೆತೆರೆಯಾಗಿ ಆತನ ಹಿಂದೆ ಓಡತೊಡಗಿದರು. ಮರಗಳು ಆಶ್ಚರ್ಯದಿಂದ ತೂಗಾಡಿದುವು. ಕಾಡಿನ ಗದ್ದಲವೆಲ್ಲವೂ ಓಡುತ್ತ ನಡೆದ ಜನರ ಹೆಜ್ಜೆಯ ಸದ್ದಿನಲ್ಲಿ ಕರಗಿಹೋಯಿತು. ಜ್ವಲಂತ ಹೃದಯದ ಆಶ್ಚರ್ಯದಲ್ಲಿ ಮುಗ್ಧರಾಗಿ ಹೋಗಿದ್ದ ಜನ ಧೈರ್ಯದಿಂದ ವೇಗವಾಗಿ ಓಡತೊಡಗಿದರು. ಜನ ಸಾಯುತ್ತಲೇ ಇದ್ದರು. ಆದರೆ ಈ ಸಲ ಕಣ್ಣೀರು ಸುರಿಸಲಿಲ್ಲ, ದೂರಲಿಲ್ಲ, ಗೊಣಗಲಿಲ್ಲ.........ಡಾಂಕೋ ಪಡೆಯ ನಾಯಕನಾಗಿ ಮುಂದೆ ಮುಂದೆ ಓಡುತ್ತಿದ್ದ. ಅವನ ಹೃದಯ ಪ್ರಜ್ವಲಿಸಿ ಉರಿಯುತ್ತಲೇ ಇತ್ತು......

"ಒಮ್ಮೆಗೇ, ದಟ್ಟವೂ ನೀರವವೂ ಆಗಿದ್ದ ಕಾಡು ಹಿಂದುಳಿದು ಅವರಿಗೆ ದಾರಿ ತೆರೆದು ನಿಂತಿತು. ಮಳೆಯಿಂದ ತೊಳೆದು ಶುಭ್ರವಾಗಿದ್ದ ಹೊಸ ಗಾಳಿಯ ಕಡಲಿನಲ್ಲಿ, ಹೊಂಬಣ್ಣದ ಸೂರ್ಯನ ಕಿರಣಗಳ ಬೆಳಕಿನ ಸಮುದ್ರದಲ್ಲಿ ಅವರು ಧುಮುಕಿದರು. ಹಿಂದೆ ಮತ್ತೆ ಬಿರುಗಾಳಿಯೆದ್ದಿತ್ತು. ಕಾಡು ಕೋಪದಿಂದ ಅಬ್ಬರಿಸುತ್ತಿತ್ತು. ಆದರೆ ಇಲ್ಲಿ ಸೂರ್ಯ ಹೊಳೆಯುತ್ತಿದ್ದ..............ಹುಲ್ಲುಗಾವಲು ನಿಟ್ಟುಸಿರಿಟ್ಟಿತು. ಮಳೆ ಹನಿಯ ಮುತ್ತುಗಳು ಹುಲ್ಲುಗರಿಕೆಗಳಲ್ಲಿ ಮಿನುಗುತ್ತಿದ್ದವು. ಎದುರಿಗಿದ್ದ ನದಿ ಚಿನ್ನದ ತಗಡಿನಂತೆ ಮಿರುಗುತ್ತಿತ್ತು......ಸಂಜೆ ಇಳಿಯುತ್ತಿತ್ತು. ಸೂರ್ಯನ ಕೆಂಗಿರಣಗಳನ್ನು ಪ್ರತಿಬಿಂಬಿಸಿದ ನದಿ ರಕ್ತಪ್ರವಾಹವಾಗಿ ಹರಿಯುತ್ತಿತ್ತು, ಡಾಂಕೋವಿನ ಹರಿದ ಹೃದಯದಿಂದ ನೆತ್ತರಿನ ಹೊನಲು ಹೊಳೆಯಾಗಿ ಹರಿಯುತ್ತಿದೆ ಎನ್ನುವ ಹಾಗೆ.

"ಡಾಂಕೋ ಉಬ್ಬಿದ ಎದೆಯಿಂದ ಆ ಹುಲ್ಲುಗಾವಲನ್ನು ಸೂಕ್ಷ್ಮವಾಗಿ ಪರೀಕ್ಷಿಸಿದ. ಆ ಬಿಡುಗಡೆಯ ನೆಲದಲ್ಲಿ ಸ್ವಚ್ಛಂದವಾಗಿ ಉಸಿರಾಡಿ ನಗತೊಡಗಿದ. ಆ ನಗುವಿನಲ್ಲಿ ಹೆಮ್ಮೆ ಹೊಳಲಿಡುತ್ತಿತ್ತು. ಮತ್ತೊಂದು ಕ್ಷಣದಲ್ಲಿ ಡಾಂಕೋ ನೆಲಕ್ಕೆ ಕುಸಿದು ಮರಣ ಹೊಂದಿದ.

"ಜನರು ಸಂತೋಷದ ಅತಿರೇಕದಿಂದ ಸುತ್ತಲೂ ನೋಡುತ್ತ ನಿಂತುಬಿಟ್ಟಿದ್ದರು.

ಅವನು ಸತ್ತುದನ್ನು, ಶವದ ಬದಿಯಲ್ಲಿ ಆ ಧೀರ ಹೃದಯ ಜ್ವಲಂತವಾಗಿ ಉರಿಯುತ್ತಲೇ ಇರುವುದನ್ನು ಜನ ಗಮನಿಸಲಿಲ್ಲ. ಆ ಜನರಲ್ಲಿ ಒಬ್ಬ ಬುದ್ಧಿವಂತ ಅದನ್ನು ನೋಡಿದ. ಭಯದಿಂದ ಆ ಜ್ವಲಂತ ಹೃದಯದ ಹತ್ತಿರ ಹೋಗಿ ಅದರ ಮೇಲೆ ಮೆಲ್ಲಗೆ ಕಾಲಿರಿಸಿದ........ಒಮ್ಮೆಲೇ ಆ ಹೃದಯ ಚೂರು ಚೂರಾಗಿ ಒಡೆದು ಕಿಡಿಗಳು ಮೇಲೆ ಹಾರಿದವು........

"......ಅದೇ ಕಿಡಿಗಳು, ಈಗಲೂ ಬಿರುಗಾಳಿಗೆ ಮುಂಚೆ ಈ ಹುಲ್ಲುಗಾವಲಿನಲ್ಲಿ ನೀಲ ಚಿಕ್ಕೆಗಳಾಗಿ ಹೊಳೆಯುತ್ತವೆ!"

........ಮುದುಕಿ ತನ್ನ ಸುಂದರವಾದ ಕಥೆಯನ್ನು ಮುಗಿಸಿದಳು. ಮತ್ತೆ ಸುತ್ತಲೂ ದೀರ್ಘ ನೀರವ ಆವರಿಸಿಕೊಂಡಿತು. ತನ್ನ ಜನಗಳಿಗಾಗಿ ಹೃದಯವನ್ನೇ ಕಿತ್ತು ಹಿಡಿದು ಅದಕ್ಕಾಗಿ ಯಾವ ಪ್ರತಿಫಲವನ್ನು ಕೂಡ ಬಯಸದೆ ಮಡಿದುಹೋದ ಡಾಂಕೋವಿನ ಚಿತ್ತಶಕ್ತಿಯನ್ನು ಕಂಡು ಆಶ್ಚರ್ಯದಿಂದ ಪ್ರಕೃತಿಯೂ ಮುಗ್ಧವಾಗಿರುವಂತೆ ತೋರುತ್ತಿತ್ತು......ಮುದುಕಿ ಆಗಲೇ ನಿದ್ದೆಯಿಂದ ತೂಕಡಿಸಲಾರಂಭಿಸಿದ್ದಳು. ನಾನು ಆಕೆಯ ಕಡೆ ತಿರುಗಿದೆ. ಈಕೆ ಇಂತಹ ಇನ್ನೆಷ್ಟು ಕಥೆಗಳನ್ನು ತನ್ನ ಮನಸ್ಸಿನಲ್ಲಿ ತುಂಬಿಕೊಂಡಿದ್ದಿರಬಹುದು ಎಂದು ಯೋಚಿಸತೊಡಗಿದೆ. ಹಾಗೇ ಡಾಂಕೋವಿನ ಜ್ವಲಂತ ಹೃದಯದ ಮಹಾ ಸಾಹಸವನ್ನು ಸ್ಮರಿಸಿಕೊಂಡೆ. ಮಾನವ ಕಲ್ಪನೆ ಎಂಥೆಂಥ ಸುಂದರವಾದ, ರೋಮಾಂಚಕಾರಿಯಾದ ಕಟ್ಟುಕತೆಗಳನ್ನು ಸೃಷ್ಟಿಸಬಲ್ಲುದೆಂದು ನೆನೆದು ಆಶ್ಚರ್ಯವಾಯಿತು.......

ಮುದುಕಿ ಇಸರ್ಜಿಲ್ ಈಗ ಗಾಢ ನಿದ್ದೆಯಲ್ಲಿದ್ದಳು. ಗಾಳಿ ಬೀಸಿ ಆಕೆಯ ಮೈ ಮೇಲಿನ ಚಿಂದಿಚೂರುಗಳನ್ನು ಸರಿಸಿ ಆಕೆಯ ದೇಹವನ್ನು ಚಳಿಗೆ ಒಡ್ಡಿತ್ತು. ನಾನು ಆಕೆಯ ಮುದಿ ದೇಹದ ಮೇಲೆ ಮತ್ತೆ ಬಟ್ಟೆಯನ್ನು ಸರಿಯಾಗಿ ಹೊದಿಸಿ, ಅದೇ ನೆಲದ ಮೇಲೆ ಒರಗಿದೆ......ಹುಲ್ಲುಗಾವಲು ಕತ್ತಲೆಯಲ್ಲಿ ನೀರವವಾಗಿ ಪವಡಿಸಿತ್ತು. ಮೋಡಗಳು ನಿರಾಶೆಯಿಂದ ನೀರವವಾಗಿ ತೇಲುತ್ತಿದ್ದವು......ಸಮುದ್ರದ ಅರ್ಥವಿಲ್ಲದ ನಿರಾಶಾ ಗೀತೆ ನನ್ನ ಕಿವಿಯನ್ನು ಅಲೆಯತೊಡಗಿತು.

## ೪. ಕೂಲಿ ಹೇಳಿದ ಕಥೆ

ಶುಭ್ರ ತುಷಾರದ ರಾಶಿರಾಶಿಯಿಂದ ಕವಿದುಕೊಂಡಿರುವ ಉನ್ನತ ಪರ್ವತಗಳ ಚೌಕಟ್ಟಿನ ಮಧ್ಯೆ ಶಾಂತವಾದ ನೀಲಿಯ ಸರೋವರ ಮೌನವಾಗಿ ರಂಜಿಸುತ್ತಿದೆ. ಕಾಡಿನ ತುಂಬುಹಸಿರು ತರಂಗ ತರಂಗವಾಗಿ ನೀರಿನ ಅಂಚಿನವರೆಗೂ ಹಬ್ಬಿ ಇಳಿದಿದೆ. ಆಚೆಯೀಚೆ ಸಕ್ಕರೆಯಲ್ಲಿ ಕಟ್ಟಿದ್ದಾರೋ ಎನ್ನುವ ಹಾಗೆ ಕಾಣುವ ಶ್ವೇತಸೌಧಗಳು, ನೀರಿನಲ್ಲಿ ಇಣಿಕಿ ನೋಡುತ್ತಿವೆ. ಮಗುವಿನ ಹಾಲುನಿದ್ದೆಯನ್ನು ಹೋಲುತ್ತದೆ, ಈ ಶ್ರೀಮಂತ ಶಾಂತಿ.

ಬೆಳಕು ಹರಿದ ಹೊತ್ತು. ಬೆಟ್ಟಗಳ ಕಡೆಯಿಂದ ಹೂವುಗಳ ನವುರಾದ ಪರಿಮಳ ತೇಲಿಬರುತ್ತಿದೆ. ಸೂರ್ಯ ಇದೀಗ ಹುಟ್ಟಿ ಮೇಲೆ ಬಂದಿದ್ದಾನೆ. ಮರದ ಎಲೆಗಳ ಮೇಲೆ ಹುಲ್ಲುಗರಿಕೆಗಳ ಅಂಚಿನಲ್ಲಿ ಮಂಜಿನ ಮಣಿಗಳು ಮಿನುಗುತ್ತಲೇ ಇವೆ. ಶಾಂತ ವಾದ ಪರ್ವತಗರ್ಭದೊಳಕ್ಕೆ ತೂರಿಕೊಂಡಿರುವ ಬಿಳಿಯ ಪಟ್ಟಿಯ ಹಾಗೆ ಒಂದು ಜಲ್ಲಿಯ ರಸ್ತೆ ಕಾಣಿಸುತ್ತಿದೆ. ರಸ್ತೆಯ ತುಂಬ ಕಲ್ಲುಗಳ ಹಾಸು. ಆದರೂ ಮುಟ್ಟಿದರೆ ಮುಕಮಲ್ಲಿನಂತೆ ಮೃದುವಾಗಿಯೇ ಇರಬೇಕೆಂದು ಭಾಸವಾಗುತ್ತದೆ.

ಅಲ್ಲಿಯೇ ಒಂದು ಕಲ್ಲು ರಾಶಿಯ ಬುಡದಲ್ಲಿ ಒಬ್ಬ ಕೂಲಿಯವ ಕೂತಿದ್ದಾನೆ. ದುಂಬಿಗಪ್ಪಿನ ಮೈ. ಅವನ ಎದೆಯ ಮೇಲೆ ಚಿನ್ನದ ಪದಕ ತೂಗಾಡುತ್ತಿದೆ. ದಯೆ ಧೈರ್ಯಗಳನ್ನು ಬಿಂಬಿಸುವ ಹಾಗಿದೆ ಅವನ ಮುಖ.

ಮೊಣಕಾಲುಗಳ ಮೇಲಿಟ್ಟುಕೊಂಡ ತನ್ನ ಕಂಚಿನಂಥ ತಲೆಯನ್ನು ಮೇಲಕ್ಕೆತ್ತಿ ಬಳಿಯಲ್ಲೆ ಮರವೊಂದರ ಕೆಳಗೆ ನಿಂತಿರುವ ಹಾದಿಗನೊಬ್ಬನತ್ತ ನೋಡುತ್ತಾನೆ ಅವನು.

ಆ ಹಾದಿಗನನ್ನು ನೋಡಿ ಹೇಳುತ್ತಾನೆ : "ಈ ಪದಕ ಸ್ವಾಮಿ—ಇದು ಈ ಸುರಂಗದ ರಸ್ತೆ ಮಾಡಿದ್ದಕ್ಕೆ ನನಗೆ ಸಿಕ್ಕಿತು".

ಮತ್ತೆ ಕೆಳಗೆ ಮುಖ ಮಾಡಿ ಎದೆಯ ಮೇಲೆ ಹೊಳೆಯುತ್ತಿರುವ ಲೋಹದ ಚೂರನ್ನು ನೋಡುತ್ತ ನೋಡುತ್ತ ಮುಗುಳು ನಗುತ್ತಾನೆ.

"ಹೌದು, ನಮ್ಮ ಮೂಳೆಯೊಳಕ್ಕೆ ಸೇರಿಕೊಳ್ಳುವ ತನಕ ಎಲ್ಲಾ ಕೆಲಸವೂ

ಕಷ್ಟವೇ ಆಗುತ್ತದೆ. ಒಮ್ಮೆ ಒಂದು ಕೆಲಸವನ್ನು ಒಲಿದು ಮೆಚ್ಚಿಕೊಂಡರೆ ಆಯಿತು. ಅದು ನಮ್ಮನ್ನು ಕಲಕಿಬಿಡುತ್ತದೆ. ಆ ಮೇಲೆ ಆ ಕೆಲಸ ಸುಲಭ.......ಆದರೆ ಈ ಕೆಲಸ—ನಮಗೆ ಸುಲಭವಾಗಲಿಲ್ಲ ಅನ್ನಿ."

ಆತ ತನ್ನ ತಲೆಯನ್ನು ಮೃದುವಾಗಿ ತೇಲಿಸಿ ಒಮ್ಮೆ ಸೂರ್ಯನ ಕಡೆ ನೋಡಿ ನಕ್ಕು, ಮತ್ತೆ ಸಾವರಿಸಿಕೊಂಡು ತನ್ನ ಕೈಗಳನ್ನಾಡಿಸಿದ. ಅವನ ಕಪ್ಪು ಕಣ್ಣುಗಳು ಹೊಳೆಯತೊಡಗಿದವು.

"ಅದು ಕೆಲವು ಸಲವಂತೂ ಭಯಂಕರವಾಗಿ ಕಾಣಿಸುತ್ತಿತ್ತು. ಭೂಮಿ ಕೂಡ ಏನೋ ಒಂದು ರೀತಿಯ ವಿಚಿತ್ರವನ್ನು ಅನುಭವಿಸಿರಬೇಕು, ಅಲ್ಲವೇ ? ನಾವು ಬೆಟ್ಟದೊಳಕ್ಕೆ ಆಳವಾಗಿ ತೋಡಿಕೊಂಡು ಅಗೆಯುತ್ತ ಗಾಯ ಮಾಡಿ ಕತ್ತರಿಸಿಕೊಂಡು ಹೋಗುತ್ತಿರುವಾಗ ಒಳಗಿನ ನೆಲದ ಕೋಪ ನೋಡಬೇಕಿತ್ತು. ಅದರ ಶ್ವಾಸ ಬಿಸಿಯೇರಿ ಹೋಗಿತ್ತು. ನಮ್ಮ ಎದೆ ಕುಗ್ಗಿ ತಲೆ ಭಾರವಾಗಿ ಮೂಳೆ ಮೂಳೆಯೆಲ್ಲ ನೋಯಲು ತೊಡಗಿತ್ತು. ಅನೇಕ ಜನ ಇದನ್ನು ಅನುಭವಿಸಿದ್ದಾರೆ !.........ನೆಲ ನಮ್ಮ ಮೇಲೆ ಇಷ್ಟಿಷ್ಟು ದಪ್ಪದ ಕಲ್ಲುಗಳನ್ನು ತೂರುತ್ತಿತ್ತು. ಕುದಿಯುವ ನೀರನ್ನು ಉಕ್ಕಿಸಿ ನಮ್ಮನ್ನು ಮುಳುಗಿಸಿಬಿಡುತ್ತಿತ್ತು. ಅಯ್ಯೋ, ಭಯಂಕರ ಸ್ವಾಮಿ ! ಕೆಲವು ಬಾರಿ ಬೆಳಕಿನ ಕಿರಣ ತಾಕಿದಾಗ ಆ ನೀರು ಕೆಂಪು ಬಣ್ಣವಾಗಿ ಹೊಳೆಯುತ್ತಿತ್ತು. ಆಗ ನನ್ನ ತಂದೆ ಹೇಳುತ್ತಿದ್ದ, 'ನಾವು ಭೂಮಿಗೆ ಗಾಯಮಾಡಿದ್ದೇವೆ. ಅದು ತನ್ನ ರಕ್ತದಲ್ಲಿ ನಮ್ಮನ್ನೆಲ್ಲ ಬೇಯಿಸಿಬಿಡುತ್ತದೆ' ಎಂದು. ಅದೇನೋ ಬರಿ ಕಲ್ಪನೆ ಅನ್ನಿ. ಆದರೆ ಅಲ್ಲಿ ಅಂಥ ಸನ್ನಿವೇಶದಲ್ಲಿ—ಆ ಭೂಮಿಯ ಆಳವಾದ ಬಸಿರಿನಲ್ಲಿ, ಉಸಿರು ಕಟ್ಟುವ ಕತ್ತಲೆಯಲ್ಲಿ, ನೀರು ಒಂದೇ ಸಮನೆ ಗೋಳುಗುಟ್ಟಿ ಸುರಿಯುತ್ತಿರುವಾಗ, ಕಬ್ಬಿಣ ಕಣ್ ಕಣ್ ಎಂದು ಕಲ್ಲಿಗೆ ಕುಟ್ಟುತ್ತಿರುವಾಗ—ಅಲ್ಲಿ ಇಂಥ ಮಾತು ಕೇಳಿದರೆ, ಕೇಳಿದ್ದೆಲ್ಲ ನಿಜವೇ ಇರಬೇಕು ಎನ್ನಿಸುತ್ತದೆ. ಆ ಮಾತು, ಆ ಭೂಮಿ ಎಲ್ಲವೂ ಭಯಂಕರವಾಗಿತ್ತು. ಅದ್ಭುತವಾಗಿತ್ತು ! ಅದರ ಎದುರಿಗೆ, ಮುಗಿಲನ್ನೆ ಮುಟ್ಟಿ ನಿಕ್ಕುವ ಆ ಎತ್ತರವಾದ ಪರ್ವತಗಳ ಎದುರಿಗೆ, ಅದರ ಬಸಿರನ್ನು ಕೊರೆಯುತ್ತ ಹೊರಟಿದ್ದ ನಾವು ಸಣ್ಣ ಕ್ರಿಮಿಗಳಾಗಿ ತೋರುತ್ತಿದ್ದೆವು......ನೀವೇ ಅದನ್ನು ನೋಡಬೇಕಿತ್ತು, ಸ್ವಾಮಿ ; ನೋಡಿದ್ದರೆ ನಾನು ಹೇಳುವ ಮಾತು ಅರ್ಥವಾಗುತ್ತಿತ್ತು. ನೀವು ನೋಡಬೇಕಿತ್ತು—ನಾವು ಇಷ್ಟು ಸಣ್ಣ ಮನುಷ್ಯರು ಅದನ್ನು ಕೊರೆಯುತ್ತ ಹೋಗುವಾಗ ಆ ಸುರಂಗದ ಬಾಯಿ ಹೇಗೆ ಆಕಳಿಸುತ್ತಿತ್ತು ! ಬೆಳಕು ಹರಿಯುವ ಹೊತ್ತಿಗೆ ನಾವು ಆ ಬಿಲದೊಳಕ್ಕೆ ಹೊಕ್ಕು ಸುರಂಗವನ್ನು ತೋಡುತ್ತ ಹೋಗುತ್ತಿರುವ ಹಾಗೆ, ಸೂರ್ಯನೂ ದುಃಖದಿಂದ ನಮ್ಮ ದಿಕ್ಕಿಗೆ ನೋಡುತ್ತಿರುವಂತೆ ಕಾಣಿಸುತ್ತಿತ್ತು. ಆ ಯಂತ್ರಗಳನ್ನು ನೋಡಬೇಕಿತ್ತು ನೀವು. ಆ ಬೆಟ್ಟದ ಮಬ್ಬು ಮುಖದಿಂದ, ಒಳಗೆ ಆಳದಲ್ಲಿ ಮಣ್ಣು ಕಡಿದು ಬೀಳುತ್ತಿರುವಾಗಿನ ಗರ್ಜನೆ, ಅದರ ಮರುದನಿ—ಓಹ್ ! ಅದೊಂದು ವಿಚಿತ್ರ ಅನು

ಭವ! ಯಾರೋ ಹುಚ್ಚರು ಗೇಲಿ ಮಾಡಿ ನಗುವ ಹಾಗೆ ಭಾಸವಾಗುತ್ತಿತ್ತು.

ಆತ ಒಮ್ಮೆ ತನ್ನ ಕೈಗಳನ್ನು ಪರೀಕ್ಷಿಸಿಕೊಂಡ. ಎದೆಯ ಮೇಲಿನ ಆ ಲೋಹದ ಚೂರನ್ನು ಮುಟ್ಟಿನೋಡಿಕೊಂಡು ಮೆಲ್ಲಗೆ ನಿಟ್ಟುಸಿರು ಬಿಟ್ಟ.

"ಹ್ಞ! ಈ ಮನುಷ್ಯರಿಗೆ ಗೊತ್ತು, ಎಲ್ಲಿ ಹೇಗೆ ಕೆಲಸಮಾಡಬೇಕು ಎನ್ನುವುದು"—ಆತ ಹೆಮ್ಮೆಯಿಂದ ಹೇಳುತ್ತಿದ್ದ—"ಆಃ! ಮನುಷ್ಯ ಎಷ್ಟು ಸಣ್ಣ ಪ್ರಾಣಿ ಸ್ವಾಮಿ. ಆದರೆ ಆತ ಒಮ್ಮೆ ಒಂದು ಕೆಲಸ ಮಾಡಲು ನಿರ್ಧರಿಸಿದ ಅಂದರೆ, ಅದಕ್ಕೆ ಟೊಂಕ ಕಟ್ಟಿ ನಿಂತರೆ ಅದನ್ನು ತಡೆಯುವುದಕ್ಕೆ ಸಾಧ್ಯವೇ ಇಲ್ಲ. ಅಂಥ ವಿಚಿತ್ರ ಶಕ್ತಿ ಬಂದುಬಿಡುತ್ತದೆ! ಅಲ್ಲದೆ, ನಾನು ಹೇಳುವ ಮಾತು ನೆನಪಿರಲಿ, ಒಂದು ಕಾಲ ಬರುತ್ತದೆ; ಮನುಷ್ಯ ತನಗೆ ಏನು ಬೇಕಾದರೆ ಅದನ್ನು ಮಾಡಿಬಿಡಬಹುದು, ಅಂಥ ಕಾಲ. ಮೊದಲು ಈ ಮಾತನ್ನು ನನ್ನ ತಂದೆ ಕೂಡ ನಂಬಲಿಲ್ಲ.

" 'ದೇವರು ಬೆಟ್ಟದ ಗೋಡೆ ಕಟ್ಟಿ ಭೂಮಿಯನ್ನು ಬೇರೆ ಬೇರೆ ವಿಭಾಗ ಮಾಡಿದ್ದಾನೆ. ಒಂದು ಊರಿಂದ ಇನ್ನೊಂದು ಊರಿಗೆ ಮಧ್ಯೆ ಇರುವ ಬೆಟ್ಟವನ್ನೆ ಕೊರೆದುಕೊಂಡು ಹೋಗುವುದೆಂದರೆ ದೇವರನ್ನೆ ವಿರೋಧಿಸಿದ ಹಾಗೆ. ನೋಡುತ್ತಿರಿ, ಅದಕ್ಕಾಗಿ ಭೂಮಿತಾಯಿ ನಮ್ಮನ್ನು ನಿರ್ನಾಮ ಮಾಡಿಬಿಡುತ್ತಾಳೆ!' ಎನ್ನುತ್ತಿದ್ದ ಆತ. ಆದರೆ ಅವನು ತಪ್ಪು ತಿಳಿದುಕೊಂಡಿದ್ದ. ತನ್ನನ್ನು ಪ್ರೀತಿಸುವವರನ್ನು ಭೂಮಿತಾಯಿ ಎಂದಿಗೂ ಹಾಳುಮಾಡುವುದಿಲ್ಲ. ಕೊನೆ ಕೊನೆಗೆ ಅವನು ಕೂಡ ಈಗ ನಾನು ಹೇಳುವ ಹಾಗೇ ಯೋಚಿಸತೊಡಗಿದ. ದಿನಕಳೆದಂತೆ ಅವನಿಗೂ ನಿರ್ಧಾರವಾಯಿತು, ತಾನು ಈ ಬೆಟ್ಟಕ್ಕಿಂತಲೂ ಹೆಚ್ಚು ಬಲಶಾಲಿಯಾಗಿದ್ದೇನೆ ಎಂಬುದು. ಆದರೆ ಒಂದು ಕಾಲವಿತ್ತು, ಆಗ ಅವನು ಹಬ್ಬದ ದಿನಗಳಲ್ಲಿ ಮೇಜಿನ ಬದಿಗೆ ಕೂತು ಎದುರಿಗೆ ಒಂದು ಹೆಂಡದ ಸೀಸೆ ಇಟ್ಟುಕೊಂಡು, ನನಗೆ, ಉಳಿದ ಜನಗಳಿಗೆ ಉಪದೇಶ ಮಾಡುತ್ತಿದ್ದ :

" 'ದೇವರ ಮಕ್ಕಳೆ'—ಇದು ಅವನಿಗೆ ಪ್ರಿಯವಾದ ಮಾತು. ಆತ ತುಂಬಾ ಒಳ್ಳೆಯವನು. ದೇವರು ಎಂದರೆ ಆತನಿಗೆ ಭಯ, ಭಕ್ತಿ—'ದೇವರ ಮಕ್ಕಳೆ! ನೀವು ಹೀಗೆ ಭೂಮಿಯ ಜೊತೆ ಸೆಣಸುವುದು ಸಾಧ್ಯವಲ್ಲ. ಆಕೆ ನಿಮ್ಮ ಮೇಲೆ ಸೇಡು ತೀರಿಸಿಕೊಂಡು ತಾನು ಮಾತ್ರ ಮುಕ್ಕಾಗದೆ ಉಳಿಯುತ್ತಾಳೆ! ನೀವೂ ನೋಡುತ್ತಿರಿ, ನಾವು ಹೀಗೆ ಬೆಟ್ಟವನ್ನು ಕೊರೆಯುತ್ತ ಹೋದರೆ ಅದರ ಮಧ್ಯಭಾಗವನ್ನು ಸೇರುವ ಹೊತ್ತಿಗೆ ಎಲ್ಲರೂ ಸುಟ್ಟು ಉರಿದುಹೋಗುತ್ತೇವೆ. ಭೂಮಿಯ ಮಧ್ಯದಲ್ಲಿ ಬೆಂಕಿ ಇರುತ್ತದೆ. ಅದು ಎಲ್ಲರಿಗೂ ಗೊತ್ತಿರುವ ವಿಷಯ. ಭೂಮಿಯನ್ನು ಉಳಬಹುದು. ಉಳುವುದರಿಂದ ಪ್ರಕೃತಿ ತನ್ನ ಬೆಳೆಯನ್ನು ಬೆಳೆಸಲು ಸಹಾಯ ಮಾಡಿದಂತಾಗುತ್ತದೆ. ಆದರೆ ಆಕೆಯ ದೇಹವನ್ನಾಗಲಿ ಮುಖವನ್ನಾಗಲಿ ಯಾವಾಗಲೂ ಕೆಡಿಸಬಾರದು. ನೋಡಿ ಬೇಕಾದರೆ, ನಾವು ಒಳಗೊಳಗೆ ಕೊರೆಯುತ್ತ ಹೋದ ಹಾಗೆ ಶಾಖ ಹೆಚ್ಚುತ್ತದೆ. ಉಸಿರಾಡುವುದು ಕೂಡ ಕಷ್ಟವಾಗುತ್ತದೆ......' ".

ಆತ ತನ್ನ ಬೆರಳುಗಳಿಂದ ಮೀಸೆಯನ್ನು ಹುರಿಮಾಡುತ್ತ ಮೃದುವಾಗಿ ಒಮ್ಮೆ ನಕ್ಕ.

"ಹಾಗೆ ಯೋಚಿಸಿದವನು ಅವನೊಬ್ಬನೇ ಅಲ್ಲ. ಅಲ್ಲದೆ ಅವನು ಹೇಳಿದ ಮಾತೂ ಸಂಪೂರ್ಣ ಸುಳ್ಳಲ್ಲ. ನಾವು ಸುರಂಗದ ಒಳಒಳಕ್ಕೆ ಹೋದ ಹಾಗೆ ಶಾಖ ಹೆಚ್ಚಾಗುತ್ತಿತ್ತು. ನಮ್ಮಲ್ಲಿ ಎಷ್ಟೋ ಜನ ಕಾಯಿಲೆ ಹಿಡಿದು ಸತ್ತರು. ಎಲ್ಲಿ ನೋಡಿದರೂ ಕುದಿನೀರಿನ ಚಿಲುಮೆ ಉಕ್ಕುತ್ತಿತ್ತು. ಭೂಮಿ ಜೋರಾಗಿ ಹೋಳು ಹೋಳಾಗಿ ಕಡಿದು ಬೀಳುತ್ತಿತ್ತು. ಹಾಗೆಯೇ ನಮ್ಮ ಕೆಲಸಗಾರರಲ್ಲಿ ಇಬ್ಬರಿಗೆ ಹುಚ್ಚು ಹಿಡಿಯಿತು. ರಾತ್ರಿ ನಮ್ಮ ಬಿಡಾರದಲ್ಲಿ ಎಷ್ಟೋ ಜನರು ನಿದ್ದೆಯಲ್ಲಿ ಭಯಂಕರ ಸ್ವಪ್ನಗಳನ್ನು ಕಂಡು ಕಿರುಚುತ್ತಿದ್ದರು. ಭಯದಿಂದ ವಿಚಿತ್ರವಾಗಿ ನರಳಿ ಹಾಸಿಗೆಯಿಂದ ಎದ್ದು ಹಾರಿ ಕೂತು ಬಿಡುತ್ತಿದ್ದರು.......

" 'ನೋಡಿ, ನಾನು ಹೇಳಿದ್ದೇ ಸರಿಯಲ್ಲವೆ ?'—ನಮ್ಮ ತಂದೆ ಹೇಳುತ್ತಿದ್ದ. ಅವನ ಕಣ್ಣುಗಳು ಭಯದಿಂದ ಕದಡಿಹೋಗುತ್ತಿದ್ದವು. ದಿನದಿನಕ್ಕೆ ಅವನ ಕೆಮ್ಮು ಹೆಚ್ಚುತ್ತಿತ್ತು....'ನಾನು ಹೇಳಿದುದೇ ಸರಿಯಲ್ಲವೇ ?'—ಮತ್ತೆ ಮತ್ತೆ ಆತ ಪ್ರಶ್ನಿಸುತ್ತಿದ್ದ —'ನಾವು ಪ್ರಕೃತಿಯನ್ನು ಜಯಿಸುವುದಕ್ಕೆ ಎಂದೆಂದಿಗೂ ಸಾಧ್ಯವಿಲ್ಲ !'

"ಕೊನೆಗೆ ಅವನು ಹಾಸಿಗೆ ಹಿಡಿದು ಮಲಗಿದ. ಮತ್ತೆ ಮೇಲೇಳಲಿಲ್ಲ. ಆತ ಮುದುಕ. ಆದರೂ ತುಂಬ ಬಲಶಾಲಿ. ಸುಮಾರು ಮೂರು ವಾರ ಆತ ಸಾವಿನ ಕೂಡ ಹೋರಾಡಿದ. ಆದರೂ ಗೊಣಗಲಿಲ್ಲ. ಧೈರ್ಯವಾಗಿಯೇ ಇದ್ದ. ತನ್ನ ಬೆಲೆ ತನಗೆ ಗೊತ್ತು ಎನ್ನುವವನ ಹಾಗೆ.

" 'ಮಗಾ, ನನ್ನ ಕೆಲಸ ಮುಗಿಯಿತು'—ಒಂದು ದಿನ ರಾತ್ರಿ ಆತ ನನ್ನನ್ನು ಕರೆದು ಹೇಳಿದ—'ನಿನ್ನ ಬಗ್ಗೆ ಎಚ್ಚರ. ಮನೆಗೆ ಹೋಗಿಬಿಡು. ಭೂಮಿತಾಯಿ ನಿನ್ನನ್ನು ಕಾಪಾಡಿಕೊಳ್ಳಲಿ.' ಆಮೇಲೆ ಬಹಳ ಹೊತ್ತು ಕಣ್ಣುಮುಚ್ಚಿ ಜೋರಾಗಿ ಉಸಿರೆಳೆಯುತ್ತ ಮಾತಿಲ್ಲದೆ ಮಲಗಿದ."

ಆತ ತನ್ನ ಕಥೆಯನ್ನು ನಿಲ್ಲಿಸಿದ. ಮೇಲಕ್ಕೆದ್ದು ಒಮ್ಮೆ ಬೆಟ್ಟಗಳತ್ತ ಕಣ್ಣು ಹಾಯಿಸಿ ಮತ್ತೆ ಕೂತು ಕಾಲು ಚಾಚಿದ. ಅವನ ಮೂಳೆಗಳು ಕಟಗುಟ್ಟಿದವು.

"ಆಮೇಲೆ ಅವನು ನನ್ನ ಕೈಹಿಡಿದು ತನ್ನ ಹತ್ತಿರಕ್ಕೆ ಎಳೆದುಕೊಂಡು ಹೇಳಿದ — ದೇವರಾಣೆ, ಸ್ವಾಮಿ, ಸುಳ್ಳು ಮಾತಲ್ಲ—'ಮಗಾ, ನನಗೆ ಗೊತ್ತು, ಹಾಗೇ ಆಗುತ್ತದೆ ಎಂದು. ಆ ಕಡೆಯಿಂದ ಬೆಟ್ಟ ಕೊರೆಯುತ್ತ ಬರುತ್ತಿರುವವರು ಮತ್ತು ನಮ್ಮ ಕಡೆಯವರು—ಇಬ್ಬರೂ ಬೆಟ್ಟದ ನಡುವೆ ಒಂದು ಕಡೆ ಕೂಡುತ್ತೀರಿ, ಸೇರಿಯೇ ಸೇರುತ್ತೀರಿ ಎಂಬ ನಂಬಿಕೆ ಇದೆ ನನಗೆ. ನಿನಗೂ ಆ ನಂಬಿಕೆ ಇದೆ ಅಲ್ಲವೇ ?'—ಹೌದು, ನನಗೆ ನಂಬಿಕೆಯಿತ್ತು—'ಒಳ್ಳೇದು ಮಗಾ, ಅದೇ ಸರಿಯಾದ ನಂಬಿಕೆ. ಮನುಷ್ಯನಿಗೆ ತಾನು ಮಾಡುವ ಕೆಲಸದಲ್ಲಿ ನಂಬಿಕೆ ಇರಬೇಕಾದ್ದು ಅತ್ಯಗತ್ಯ. ಜೊತೆಗೆ ದೇವರಲ್ಲಿ ವಿಶ್ವಾಸ

ಬಿಡಬೇಕು. ದೇವರೂ ಒಳ್ಳೆಯದು ಮಾಡುತ್ತಾನೆ........ನಿನಗೆ ಒಂದು ಕೆಲಸ ಹೇಳು ತ್ತೇನೆ. ನೀವು ಈ ದಿಕ್ಕಿನವರು ಮತ್ತು ಆ ಕಡೆಯವರು ಮಧ್ಯೆ ಬೆಟ್ಟದ ಗರ್ಭದಲ್ಲಿ ಒಂದು ಕಡೆ ಕೂಡಿದರೆ, ಆಗ ನೀನು ನನ್ನ ಗೋರಿಯ ಹತ್ತಿರ ಬಂದು ಹೇಳಿಬಿಡು, ಅಪ್ಪಾ, ನಮ್ಮ ಕೆಲಸ ಮುಗಿಯಿತು—ಎಂದು. ನನಗೆ ತಿಳಿಯುತ್ತದೆ !'

"ನಾನು ಒಪ್ಪಿ ಹಾಗೆಯೇ ಮಾಡುತ್ತೇನೆಂದು ಮಾತುಕೊಟ್ಟೆ. ಐದು ದಿನಗಳ ಮೇಲೆ ಅವನು ತೀರಿಕೊಂಡ. ಸಾಯುವುದಕ್ಕೆ ಎರಡು ದಿನ ಮುಂಚೆ ಅವನು ನನ್ನನ್ನು ಮತ್ತು ನಮ್ಮ ಕಡೆಯವರನ್ನು ಕರೆದು, ಆ ಸುರಂಗದಲ್ಲೆ ತಾನು ಕೆಲಸ ಮಾಡುತ್ತಿದ್ದ ಕಡೆಯಲ್ಲೆ ತನ್ನನ್ನು ಹೂಳಬೇಕು ಎಂದು ಹೇಳಿದ. ಜ್ವರದ ಉನ್ಮತ್ತತೆಯಿಂದ ಹಾಗೆ ಹುಚ್ಚು ಹುಚ್ಚಾಗಿ ಮಾತಾಡುತ್ತಿದ್ದಾನೆ ಎಂದುಕೊಂಡಿದ್ದೆ ನಾನು.

"ಅವನು ಸತ್ತು ಹದಿಮೂರು ವಾರಗಳು ಕಳೆದಿದ್ದವು. ಆಮೇಲೆ ಒಂದು ದಿನ ಬಂಗಾರದಂಥ ದಿನ, ನಾವು ಮತ್ತು ಇನ್ನೊಂದು ದಿಕ್ಕಿನಿಂದ ಬೆಟ್ಟವನ್ನು ಕೊರೆಯುತ್ತ ಬರುತ್ತಿದ್ದ ಪಂಗಡದವರು ಬೆಟ್ಟದ ಮಧ್ಯೆ ಸುರಂಗದಲ್ಲಿ ಕೂಡಿದೆವು. ಅದೊಂದು ಹುಚ್ಚು ದಿನ, ಸ್ವಾಮಿ, ಹುಚ್ಚು ದಿನ !....ನಾವು ಭೂಮಿಯ ಗರ್ಭದಲ್ಲಿ ನಿಂತು ಆ ಕಾಳ ಕತ್ತಲೆಯಲ್ಲಿ ಆಚೆಯ ಪಕ್ಕಿನವರ ಕೆಲಸದ ಸದ್ದು ಕೇಳಿದಾಗ, ಆ ಭೂಮಿಯ ಬಸಿರಲ್ಲಿ ನಮ್ಮನ್ನು ಕೂಡುವುದಕ್ಕೆ ಬರುತ್ತಿದ್ದ ಕೆಲಸಗಾರರ ಆಯುಧದ ಸದ್ದನ್ನು ಕೇಳಿದಾಗ— ಓಹ್, ಅದು ನಿಮಗೆ ಗೊತ್ತಾಗಬಹುದು, ಸ್ವಾಮಿ, ಆ ಹರ್ಷ !........ನಮ್ಮ ಅಷ್ಟು ಜನರನ್ನೂ ಕೂಡಿಸಿ ನುಚ್ಚುನೂರಿ ಮಾಡುವ ಭೂಮಿಯ ಭಾರ ನಮ್ಮ ತಲೆಯ ಮೇಲೆ !

"ಸುಮಾರು ದಿನ, ಹೀಗೆಯೇ ಆ ದಿಕ್ಕಿನಿಂದ ಕೆಲಸ ಮಾಡುತ್ತ ಬರುವವರ ಸಪ್ಪಳ ಕೇಳಿಸುತ್ತಿತ್ತು. ದಿನ ದಿನಕ್ಕೂ ಆ ಸದ್ದು ಹೆಚ್ಚಾಗಿ, ಸ್ಪಷ್ಟವಾಗುತ್ತ ಬರುತ್ತಿತ್ತು. ಗೆದ್ದುಬಿಟ್ಟೆವು ಎನ್ನುವ ಆನಂದದ ರಭಸದಲ್ಲಿ ದೆವ್ವಗಳ ಹಾಗೆ ಕೆಲಸ ಮಾಡಲು ತೊಡ ಗಿದೆವು. ನಮಗೆ ಏನೇನೂ ಬೇಕಾಗಲಿಲ್ಲ; ಸ್ವಲ್ಪ ಕೂಡ ಶ್ರಮ ತೋರುತ್ತಿರಲಿಲ್ಲ. ಆಹ್ ! ಎಷ್ಟು ಚೆನ್ನಾಗಿತ್ತು ಅದು ! ಒಳ್ಳೇ ಬಿಸಿಲು ಹಬ್ಬಿದ ದಿನ ಬಯಲಲ್ಲಿ ನಿಂತು ಕುಣಿಯುತ್ತಿರುವ ಹಾಗೆ ಭಾಸವಾಗುತ್ತಿತ್ತು. ಎಲ್ಲರೂ ಮಕ್ಕಳ ಹಾಗೆ ಆಗಿಬಿಟ್ಟಿದ್ದೆವು. ಏನನ್ನು ಕಂಡರೂ ದಯೆ, ಕರುಣೆ; ಏನು ಕೆಲಸ ಮಾಡಿದರೂ ಅಷ್ಟು ನಯ........ ಓಹ್, ಆ ಭೂಮಿಯ ಒಳಗೆ ಕತ್ತಲೆಯಲ್ಲಿ ಹೆಗ್ಗಣಗಳ ಹಾಗೆ ಕೊರೆಯುತ್ತ ಹೋಗು ವಾಗ, ಆ ದಿಕ್ಕಿನವರನ್ನು ಕೂಡಬೇಕು ಎನ್ನುವ ಆಸೆ ಹೇಗೆ ಬೆಂಕಿಯಾಗಿ ಉರಿಯುತ್ತಿರು ತ್ತದೆ ಎಂಬುದು ನಿಮಗೆ ತಿಳಿದಿದ್ದರೆ........!"

ಆ ನೆನಪುಗಳ ಕಾವಿನಿಂದ ಉದ್ರೇಕಗೊಂಡು ಅವನ ಮುಖ ಅರಳುತ್ತಿರುವಂತೆ ಕಾಣಿಸುತ್ತಿತ್ತು. ತನ್ನ ಕಥೆಯನ್ನು ಕೇಳುತ್ತ ನಿಂತಿದ್ದ ದಾರಿಗನ ಹತ್ತಿರಕ್ಕೆ ಬಂದು, ಪ್ರಾನವೀಯತೆಯಿಂದ ಬೆಳಗುತ್ತಿದ್ದ ತನ್ನ ಆಳವಾದ ಕರಿಯ ಕಣ್ಣುಗಳಿಂದ ಅವನ

ಕಣ್ಣುಗಳನ್ನೇ ದಿಟ್ಟಿಸುತ್ತ ಸಂತೋಷದ ಮೆಲ್ದನಿಯಲ್ಲಿ ಮುಂದುವರಿಸಿದ :

"ಆಮೇಲೆ, ಕೊನೆಗೆ, ಮಧ್ಯೆ ಇದ್ದ ಒಂದು ಮಣ್ಣಿನ ಪದರು ಕುಸಿದು ಬಿದ್ದು ಪಂಜಿನ ಹಳದಿ ಬೆಳಕು ಆ ದೊಡ್ಡ ಕಿಂಡಿಯನ್ನು ಬೆಳಗುತ್ತಿರುವುದು ಕಾಣಿಸಿದಾಗ, ಸಂತೋಷದಿಂದ ಒಂದೇ ಸಮನೆ ಕಣ್ಣೀರು ಉಕ್ಕಿ ಹರಿಯುತ್ತಿದ್ದ ಕರಿಯ ಮುಖಗಳನ್ನು, ಅದರ ಹಿಂದೆ ಸಾಲು ಪಂಜುಗಳನ್ನು, ಮತ್ತೂ ಹಿಂದೆ ಹೊಳೆಯುವ ಕಾಳಮುಖದ ಉರಿಯುವ ಕಣ್ಣುಗಳನ್ನು—ಎಲ್ಲವನ್ನೂ ನೋಡುತ್ತ, ಗೆದ್ದುಬಿಟ್ಟೆವು ಗೆದ್ದುಬಿಟ್ಟೆವು ಎಂದು ಎಲ್ಲರೂ ಕೂಗಾಡತೊಡಗಿದರು. ಆ ಸಂತೋಷದ ಕೂಗು !............ಸ್ವಾಮಿ, ನನ್ನ ಜೀವಮಾನದಲ್ಲೆಲ್ಲ ಅತ್ಯಂತ ಆನಂದದ ದಿನ ಅದು. ಆ ದಿನವನ್ನು ನೆನಸಿಕೊಂಡಾಗ ನನಗೆ ತೋರುತ್ತದೆ, ನನ್ನ ಜೀವನ ವ್ಯರ್ಥವಾಗಲಿಲ್ಲ. ಆ ನನ್ನ ಕೆಲಸ ಪವಿತ್ರವಾದ ಕೆಲಸ. ದೊಡ್ಡ ಕೆಲಸ. ನಿಜವಾಗಿಯೂ ಪವಿತ್ರವಾದ ಕೆಲಸ, ಸ್ವಾಮಿ, ಪವಿತ್ರವಾದ ಕೆಲಸ! ಅಲ್ಲಿಂದ ಹೊರಟು ಸೂರ್ಯನ ಬೆಳಕಿಗೆ ಬಂದಾಗ ನಾವು ಎಷ್ಟೋ ಜನ ಸಂತೋಷದಿಂದ ನೆಲದ ಮೇಲೆ ಉರುಳಾಡತೊಡಗಿದೆವು. ನೆಲವನ್ನು ಮುತ್ತಿಡುತ್ತ ಅತ್ತೆವು......ಒಳ್ಳೇ ಯಕ್ಷಿಣಿಯ ಕಥೆಯಂತೆ ವಿಚಿತ್ರವಾಗಿ ತೋರುತ್ತದೆ, ಅಲ್ಲವೆ ಸ್ವಾಮಿ ? ಹೌದು......ನಾವು ಜಯಿಸಿದ ಬೆಟ್ಟವನ್ನು ಹರ್ಷದಿಂದ ಮುತ್ತಿಟ್ಟೆವು; ನೆಲವನ್ನು ಮುತ್ತಿಟ್ಟೆವು. ಆ ದಿನ ನನಗೆ ಕಂಡಿತು, ಎಂದಿಗಿಂತ ಹೆಚ್ಚಾಗಿ ಅಂದು ನನಗೂ ಭೂಮಿಗೂ ತೀರಾ ಹತ್ತಿರದ ಸಂಬಂಧವಿದೆ ಎಂದು. ಆ ದಿನ ಸ್ವಾಮಿ, ನಾನು ಹೆಂಗಸನ್ನು ಪ್ರೀತಿಸುವ ಹಾಗೆಯೇ ಪ್ರೀತಿಸಿದೆ ನೆಲವನ್ನು !

"ಅನಂತರ ನಾನು ನನ್ನ ತಂದೆಯ ಗೋರಿಯ ಹತ್ತಿರ ಹೋದೆ. ನನಗೆ ಖಂಡಿತವಾಗಿ ಗೊತ್ತು, ಸತ್ತವರ ಎದುರು ಏನು ಹೇಳಿದರೂ ತಿಳಿಯದೆಂದು. ಆದರೂ ಅಲ್ಲಿಗೆ ಹೋದೆ. ಏಕೆಂದರೆ, ನಮಗಾಗಿ ದುಡಿದವರಿಗೆ, ನಮಗಿಂತ ಹೆಚ್ಚಾಗಿ ನಮ್ಮ ಸಲುವಾಗಿ ನೊಂದವರಿಗೆ, ಅವರ ಇಚ್ಛೆಯನ್ನು ಗೌರವಿಸಿ ನಡೆಸಿಕೊಡುವುದು ನಮ್ಮ ಕರ್ತವ್ಯ ; ಅಲ್ಲವೆ, ಸ್ವಾಮಿ ?

"ಹ್ಞ ! ಹೌದು. ನಾನು ಅವನ ಗೋರಿಯ ಹತ್ತಿರ ಹೋದೆ. ಅಲ್ಲಿ ನಿಂತು ನೆಲ ತಟ್ಟಿ ತಂದೆ ಹೇಳಿದಂತೆಯೇ ಕೂಗಿದೆ :

'ಅಪ್ಪ ! ನಮ್ಮ ಕೆಲಸ ಮುಗಿಯಿತು'—ದೊಡ್ಡದಾಗಿ ಕಿರುಚಿದೆ—'ಮನುಷ್ಯ ಗೆದ್ದುಬಿಟ್ಟ ! ನಮ್ಮ ಕೆಲಸ ಮುಗಿಯಿತು !' "

## ೫ ಮುದುಕ ಹೇಳಿದ ಕಥೆ

ರೋವರ್ ಮತ್ತು ಜಿನೋವ ಪಟ್ಟಣಗಳ ನಡುವಿನ ಒಂದು ಸಣ್ಣ ನಿಲ್ದಾಣದಲ್ಲಿ ರೈಲು ನಿಂತಿತು. ಹೊರಗಿಂದ ಒಬ್ಬ ಆಳು ಬಂದು ನಮ್ಮ ಗಾಡಿಯ ಬಾಗಿಲನ್ನು ತೆಗೆದ. ಯಾರೋ ನಾಲ್ಕು ಜನ ಒಬ್ಬ ಮುದುಕನನ್ನು ಕೈಹಿಡಿದು ಮೆಲ್ಲಗೆ ನಡೆಸಿಕೊಂಡು ಬಂದು ಗಾಡಿಯೊಳಕ್ಕೆ ಹತ್ತಿಸಿದರು. ಆ ಮುದುಕ ಜೀರ್ಣವಾಗಿ ಹೋಗಿದ್ದ ; ಮೈಯಲ್ಲಿ ಒಂದು ತೊಟ್ಟು ನೆತ್ತರೂ ಇದ್ದಂತೆ ಕಾಣುತ್ತಿರಲಿಲ್ಲ. ಒಂದು ಕಣ್ಣು ಬೇರೆ ಊನವಾಗಿ ಹೋಗಿತ್ತು.

"ಬಹಳ ಮುದುಕ !"—ಎಲ್ಲರೂ ಒಟ್ಟಾಗಿ ಹೇಳಿದರು ; ತುಂಬು ಹೃದಯದಿಂದ ನಕ್ಕರು.

ಆದರೆ ಮತ್ತೆ ನೋಡುವಷ್ಟರಲ್ಲಿ ಮುದುಕ ಸಾಕಷ್ಟು ಬಲಶಾಲಿಯಾಗಿಯೇ ಕಾಣಿಸಿದ. ಗಾಡಿಯ ಮೇಲೇರಿದವನು ತನ್ನ ಸುಕ್ಕು ಕೈಗಳನ್ನು ಮೇಲಕ್ಕೆತ್ತಿ ಜೊತೆಯವರಿಗೆ ತನ್ನ ಕೃತಜ್ಞತೆಯನ್ನು ಸೂಚಿಸಿದ. ಈಕಡೆ ತಿರುಗಿ, ನರೆಗೂದಲಿನ ತಲೆಯಿಂದ ಹರಕು ಹ್ಯಾಟನ್ನು ತೆಗೆದು, ತೀರ ಸರಳವಾದ ವಿನೀತಭಾವದಿಂದ ನಾವೆಲ್ಲ ಕುಳಿತಿದ್ದ ಬೆಂಚುಗಳತ್ತ ತನ್ನ ಒಂದೇ ಕಣ್ಣಿನಿಂದ ಸೂಕ್ಷ್ಮವಾಗಿ ದೃಷ್ಟಿ ಹಾಯಿಸಿ ಮೃದುವಾಗಿ ಕೇಳಿದ :

"ಕೂತುಕೋಬಹುದಲ್ಲ, ನಾನು ?"

ಗಾಡಿಯಲ್ಲಿ ಕೂತಿದ್ದವರು ಸ್ವಲ್ಪ ಸರಿದು ಆ ಮುದುಕನಿಗೆ ಎಡೆಮಾಡಿಕೊಟ್ಟರು. ಆತ ಎದೆ ಹಗುರವಾಯಿತೆಂಬಂತೆ ನಿಟ್ಟುಸಿರು ಬಿಟ್ಟು, ಬರಿ ಎಲುಬಿನ ಮೊಣಕಾಲುಗಳ ಮೇಲೆ ಕೈಗಳನ್ನೂರಿಕೊಂಡು ಮೆಲ್ಲಗೆ ಕೂತುಕೊಂಡ. ಮತ್ತೊಮ್ಮೆ ಸುತ್ತ ಕಣ್ಣು ಹಾಯಿಸಿ ಮೃದುವಾಗಿ ನಕ್ಕ, ಪರಿಶುದ್ಧವಾದ, ಹಲ್ಲಿಲ್ಲದ ಬೊಚ್ಚು ನಗು !

"ಬಹಳ ದೂರವಾ, ಅಜ್ಜ ?"—ನನ್ನ ಸಂಗಡಿಗನೊಬ್ಬ ಕೇಳಿದ.

ಆತನ ಉತ್ತರ ತಯಾರಾಗಿತ್ತು. "ಓ, ಏನಿಲ್ಲ. ಇಲ್ಲಿಂದ ಮೂರು ಸ್ಟೇಷನ್, ಅಷ್ಟೆ. ನನ್ನ ಮೊಮ್ಮಗನ ಮದುವೆಗೆ ಹೋಗುತ್ತಿದೇನೆ........"

ಮತ್ತೆ ಕೆಲವು ನಿಮಿಷಗಳಲ್ಲಿ, ರೈಲಿನ ಗಾಲಿಯ ಲಯಬದ್ಧವಾದ ಹೊಡೆತಕ್ಕೆ ಶ್ರುತಿಗೂಡಿಸಿ ಆತ ತನ್ನ ಕಥೆಯನ್ನು ಹೇಳುತ್ತಿದ್ದ. ಆತನ ದೇಹ ಅತ್ತಿತ್ತ ತೂಗಾಡುತ್ತಿತ್ತು, ಬಿರುಗಾಳಿಯ ದಿನದಲ್ಲಿ ಅರೆಮುರಿದ ಕೊಂಬೆ ತೂಗುವ ಹಾಗೆ.

"ನಾನು ಲಿಗೊರಿಯಾ ಪ್ರಾಂತದವ," ಆತ ಹೇಳಿದ, "ನಾವು ಲಿಗೊರಿಯನ್ನರು ಬಹಳ ಗಟ್ಟಿಮುಟ್ಟಾದ ಜನ. ನನ್ನನ್ನೇ ತೆಗೆದುಕೊಳ್ಳಿ. ನನಗೆ ಹದಿಮೂರು ಜನ ಗಂಡುಮಕ್ಕಳು, ನಾಲ್ಕು ಹೆಣ್ಣು. ಮೊಮ್ಮಕ್ಕಳಂತೂ ಎಷ್ಟು ಜನ ಇದ್ದಾರೆ ನನಗೇ ತಿಳಿಯದು! ಈಗ ಮದುವೆ ನಿಶ್ಚಯವಾದ್ದು, ನನ್ನ ಎರಡನೇ ಮೊಮ್ಮಗನಿಗೆ...... ಹೇಗೆ ? ಚೆನ್ನಾಗಿದೆ, ಅಲ್ಲ ?"

ತನ್ನ ಏಕಾಕ್ಷಿಯಿಂದ ನಮ್ಮೆಲ್ಲರನ್ನೂ ಹೆಮ್ಮೆಯಿಂದ ಅವಲೋಕಿಸಿ, ಆ ಮುದುಕ ಸಂತೋಷದಿಂದ ಚಪ್ಪರಿಸಿ ನಕ್ಕು ಮುಂದುವರಿಸಿದ :

"ನೋಡಿ, ನನ್ನ ದೇಶಕ್ಕೆ ದೊರೆಗಳಿಗೆ ಎಷ್ಟು ಜನಗಳನ್ನು ಕೊಟ್ಟಿದ್ದೇನೆ!......

"ನನ್ನ ಒಂದು ಕಣ್ಣು ಹೇಗೆ ಹೋಯಿತು ಗೊತ್ತೆ ? ಅದೊಂದು ಕತೆ. ಬಹಳ ದಿನಗಳ ಹಿಂದೆ, ಅನ್ನಿ. ಆಗ ನಾನಿನ್ನೂ ಚಿಕ್ಕ ಹುಡುಗ. ಆದರೂ ನನ್ನ ತಂದೆಯ ಸಂಗಡ ಅವನ ಕೆಲಸದಲ್ಲಿ ನೆರವಾಗುತ್ತಿದ್ದೆ. ದ್ರಾಕ್ಷೆ ತೋಟದಲ್ಲಿ ಮಣ್ಣನ್ನು ಅಗೆದು ಹದ ಮಾಡುವುದು ಆತನ ಕೆಲಸ. ಅಲ್ಲಿಯ ನೆಲ ಬಹಳ ಗಟ್ಟಿ; ಅಗೆಯುವುದು ತುಂಬಾ ಕಷ್ಟ. ಕೆಲಸ ಮಾಡುವಾಗ ಬಹಳ ಎಚ್ಚರಿಕೆಯಿಂದ ಇರಬೇಕಾಗಿತ್ತು. ಒಂದು ದಿನ, ನನ್ನ ತಂದೆ ಪಿಕ್ಕಾಸು ಹಿಡಿದು ಅಗೆಯುತ್ತಾ ಇರುವಾಗ, ಫಕ್ಕನೆ, ಒಂದು ಇಷ್ಟು ದೊಡ್ಡ ಕಲ್ಲು ಹಾರಿಬಂದು ಸರಿಯಾಗಿ ನನ್ನ ಕಣ್ಣಿಗೆ ಬಡಿಯಿತು........ಆ ನೋವು!—ಈಗ ನನಗೆ ನೆನಪಿಲ್ಲ ಅನ್ನಿ—ಆದರೆ, ಆ ದಿನ........ನಾನು ಊಟ ಮಾಡುತ್ತ ಕುಳಿತಿದ್ದಾಗ ಕಣ್ಣು ಉದುರಿ ಕೆಳಗೆ ಬಿದ್ದುಬಿಟ್ಟಿತು. ಆ! ನೆನಸಿಕೊಂಡರೆ ಮೈ 'ಜುಂ' ಅನ್ನುತ್ತದೆ, ಸ್ವಾಮಿ! ಆಮೇಲೆ ಅದನ್ನು ಮತ್ತೆ ಅದೇ ಜಾಗದಲ್ಲಿ ಕೂರಿಸಿ ಬಿಸಿಯಾದ ಅನ್ನದ ಶಾಖ ಕೊಟ್ಟರು; ಏನೇನೋ ಔಷಧಿ ಹಾಕಿದರು. ಏನು ಮಾಡಿದರೆ ಏನು ಉಪಯೋಗ ನನ್ನ ಕಣ್ಣು ಹೋಗಿಯೇ ಬಿಟ್ಟಿತು!"

ಮುದುಕ ಬಿಳಿಚಿಕೊಂಡು ಅಲುಗುತ್ತಿದ್ದ ತನ್ನ ಕೆನ್ನೆಯನ್ನು ಬಲವಾಗಿ ಸವರಿಕೊಂಡ; ಮತ್ತೆ ಉಲ್ಲಾಸ ಚಿಮ್ಮಿ ಮೃದುವಾಗಿ ನಕ್ಕು ತನ್ನ ಕಥೆಯನ್ನು ಮುಂದುವರಿಸಿದ :

"ಆಗಿನ ಕಾಲದಲ್ಲಿ, ಈಗಿನ ಹಾಗೆ ಇಷ್ಟೆಲ್ಲ ಜನ ವೈದ್ಯರೂ ಇರಲಿಲ್ಲ. ಜನ ಏನೋ ಒಂದು ರೀತಿಯಲ್ಲಿ ಹುಚ್ಚು ಹುಚ್ಚಾಗಿ ಬದುಕುತ್ತಾ ಇದ್ದರು, ನಿಜ. ಆದರೆ ಆ ಜನ ಈಗಿನವರಿಗಿಂತ ಸ್ವಲ್ಪ ಹೆಚ್ಚು ದಯಾವಂತರಾಗಿದ್ದರು ಎಂದು ಕಾಣುತ್ತದೆ."

ಆತನ ಆಳವಾದ ನೆರಿಗೆಗಳ ಬರಿಯ ಚರ್ಮದ ಸುಕ್ಕು ಮುಖ, ಒಂದೇ ಕಣ್ಣು, ಕೆತ್ತಿರಿಸಿದಂಥ ನರೆಗಪ್ಪಿನ ಇಳಿಗೂದಲು—ಇವೆಲ್ಲ ಏನೋ ಕುಚೋದ್ಯವನ್ನು ರಹಸ್ಯ ವನ್ನು ಸೂಚಿಸುವಂತೆ ಕಾಣುತ್ತಿದ್ದವು.

"ನೀವೂ ನನ್ನಷ್ಟೇ ವರ್ಷ, ಇಷ್ಟೇ ದೀರ್ಘಕಾಲ ಬದುಕಿದ ಮೇಲೆ, ಜನರನ್ನು ಸರಿಯಾಗಿ ಅರ್ಥಮಾಡಿಕೊಳ್ಳಬಹುದು. ಹಾಗೆಂದು ನಿಮಗೂ ಅನ್ನಿಸುತ್ತದೆ, ಅಲ್ಲ ?"

ಹೇಳ ಹೇಳುತ್ತ ಯಾರನ್ನೋ ನಿಂದಿಸುವವನ ಹಾಗೆ ಎಲುಬಿನ ಕಡ್ಡಿಯಾಗಿದ್ದ ತನ್ನ ಕಪ್ಪು ಬೆರಳನ್ನು ಗಂಭೀರವಾಗಿ ಮೇಲಕ್ಕೆತ್ತಿದ.

"ನಾನು ನಿಮಗೂ ಸ್ವಲ್ಪ ಹೇಳುತ್ತೇನೆ ಸ್ವಾಮಿ, ಜನಗಳ ಬಗ್ಗೆ......

ನನ್ನ ತಂದೆ ತೀರಿಕೊಂಡಾಗ—ಆಗಿನ್ನೂ ನನಗೆ ಹದಿಮೂರು ವರ್ಷ ವಯಸ್ಸು. ಈಗ ಇರುವುದಕ್ಕಿಂತ ಕೂಡ ಎಷ್ಟೋ ಬಡಕಲಾಗಿದ್ದೆ, ಆಗ ನಾನು. ಆದರೂ ಆಗ ಚಟುವಟಿಕೆಯಾಗಿದ್ದೆ, ಅನ್ನಿ. ಕೆಲಸ ಅಂದರೆ ನನಗೆ ಶ್ರಮವೇ ಕಾಣುತ್ತಿರಲಿಲ್ಲ. ಅದೆಲ್ಲ ನನ್ನ ತಂದೆಯಿಂದ ಪಡೆದುಕೊಂಡು ಬಂದಿದ್ದು. ನಮಗಿದ್ದ ತುಂಡು ಹೊಲ ಕೂಡಾ ಆಗ ಸಾಲಕ್ಕೆ ಮಾರಾಟವಾಗಿ ಹೋಗಿತ್ತು. ನನ್ನ ಒಂದು ಕಣ್ಣು, ಎರಡು ಕೈ—ಇವನ್ನೆ ನಂಬಿಕೊಂಡು ಎಲ್ಲಿ ಕೆಲಸವಿದೆಯೆಂದರೆ ಅಲ್ಲಿ ದುಡಿದು ಬದುಕುತ್ತಿದ್ದೆ......ತುಂಬಾ ಕಷ್ಟದ ಜೀವನ, ಅನ್ನಿ. ಆದರೂ ಪ್ರಾಯ ಯಾವಾಗಲೂ ಕಷ್ಟಕ್ಕೆ ಜಗ್ಗುವುದಲ್ಲ ಅಲ್ಲವೆ ?

ನನ್ನ ಹತ್ತೊಂಬತ್ತನೇ ವರ್ಷದಲ್ಲಿ, ಆಗ ನನಗೆ ಒಬ್ಬ ಹುಡುಗಿ ಸಿಕ್ಕಿದಳು. ವಿಧಿ ಲಿಖಿತ! ಆಕೆಗೂ ನನ್ನ ಹಾಗೇ ಕಡುಬಡತನ. ಆದರೂ ಅವಳು ನನಗಿಂತ ಎಷ್ಟೋ ಬಲವಾಗಿದ್ದಳು ; ಎತ್ತರವಾಗಿದ್ದಳು. ಸದಾ ರೋಗಿಯಾದ ತನ್ನ ತಾಯಿಯ ಜೊತೆಗೆ ಇರುತ್ತಿದ್ದ ಆಕೆ, ನನ್ನಂತೆಯೇ ಸಿಕ್ಕಿದ ಕೆಲಸ ಮಾಡಿಕೊಂಡು ಜೀವಿಸಬೇಕಾಗಿತ್ತು. ಹೇಳಲಾರದಷ್ಟು ಸುಂದರಿಯಲ್ಲದಿದ್ದರೂ ಆಕೆ ಕುರೂಪಿಯಾಗಿರಲಿಲ್ಲ. ಒಳ್ಳೆಯ ಮೈ ಕಟ್ಟು, ಶುದ್ಧವಾದ ಮುಖ. ಅಲ್ಲದೆ ಎಷ್ಟು ಕರುಣೆ ಎನ್ನುತ್ತೀರಿ ಆಕೆಗೆ! ಆಕೆಯ ದನಿ ಎಷ್ಟು ಮಧುರವಾಗಿತ್ತು!...........ಆಹ್! ಎಷ್ಟು ಸೊಗಸಾಗಿ ಹಾಡುತ್ತಿದ್ದಳು! —ಒಳ್ಳೇ ನುರಿತ ಸಂಗೀತಗಾರರ ಹಾಗೆ. ಒಳ್ಳೆಯ ಶಾರೀರಕ್ಕೆ ತುಂಬ ಬೆಲೆಯಿದೆ, ಸ್ವಾಮಿ........ನಾನು ಕೂಡಾ ಸಾಕಷ್ಟು ಚೆನ್ನಾಗಿಯೇ ಹಾಡುತ್ತಿದ್ದೆ, ಎನ್ನಿ........

'ನಾವಿಬ್ಬರೂ ಮದುವೆ ಮಾಡಿಕೊಳ್ಳೋಣ ?'—ನಾನು ಒಂದು ದಿನ ಅವಳನ್ನು ಕೇಳಿದೆ.

'ಅಯ್ಯೋ, ಒಕ್ಕಣ್ಣ. ಹುಚ್ಚು ಕೆಲಸವಾದೀತು' ಆಕೆ ಹೇಳಿದಳು, 'ನಮ್ಮಿಬ್ಬರ ಹತ್ತಿರವೂ ಬಿಡಿಗಾಸಿಲ್ಲ ; ಇಬ್ಬರೂ ಒಂದೇ ರೀತಿಯಾಗಿದ್ದೇವೆ. ಮುಂದೆ ನಾವು ಬದುಕು ವುದಾದರೂ ಹೇಗೆ ?'

ದೇವರೂ ಹೇಳಬಹುದಾಗಿದ್ದ ಸತ್ಯ ಅದು!—ನಮ್ಮಿಬ್ಬರ ಹತ್ತಿರವೂ ಬಿಡಿ ಗಾಸಿನ ವಸ್ತುವಿಲ್ಲ. ಆದರೆ ಹರೆಯದ ಪ್ರೇಮಿಗಳಿಗೆ ಏನು ಬೇಕು? ನಿಮಗೂ ಗೊತ್ತಿರಬೇಕು, ಪ್ರೇಮಕ್ಕೆ ಬೇರೆ ಯಾವ ವಸ್ತುವಿನ ಅಗತ್ಯವೂ ಇಲ್ಲವೆನ್ನುವುದು. ನಾನು ಆಕೆಗೆ ಮತ್ತೆ ಮತ್ತೆ ಅದನ್ನೇ ಒತ್ತಿ ಹೇಳಿದೆ. ಕೊನೆಯಲ್ಲಿ ಗೆದ್ದವನು ನಾನೇ!

'ಸರಿ! ನಿನ್ನ ಮಾತೇ ಸರಿಯಾದ್ದು ಎಂದು ಕಾಣುತ್ತದೆ', ಎಂದಳು. ಕೊನೆ ಗೊಂದು ದಿನ ನನ್ನ ಈದಾ—'ಏನೋ ದೇವಮಾತೆಯ ದಯವೊಂದಿದ್ದರೆ, ಅವಳು ಕರುಣಿಸಿದರೆ ಒಳ್ಳೆಯದೇ ಆಗಬಹುದು. ನಾವು ಈಗ ಬೇರೆ ಬೇರೆಯಾಗಿರುವವರು ಒಟ್ಟಿಗೇ ಇದ್ದರೆ ಆಕೆಗೆ ಸಹಾಯ ಮಾಡಲಿಕ್ಕೂ ಸುಲಭವೇ ಆದೀತು!'

ಅಲ್ಲಿಂದ ನಾವು ಪುರೋಹಿತರ ಹತ್ತಿರ ಹೋದೆವು.

'ಶುದ್ಧ ಹುಡುಗಾಟ, ಹುಚ್ಚು!' ಎಂದರು ಪುರೋಹಿತರು, 'ಈಗ ಇರುವಂತೆಯೇ ಲಿಗೋರಿಯಾ ಪ್ರಾಂತದಲ್ಲಿ ಬೇಕೆನ್ನುವಷ್ಟು ಜನ ತಿರುಕರಿಲ್ಲವೆ? ಅಯ್ಯೋ, ನಿರ್ಭಾಗ್ಯರೆ, ನೀವು ಪಿಶಾಚರ ಕೈಗೊಂಬೆಗಳಾಗಿ ಬಿಟ್ಟಿದ್ದೀರಿ. ಬೇಡ. ಆ ಪಿಶಾಚದ ದುರಾಸೆಗಳಿಗೆ ಬಲಿಯಾಗದೆ, ಅವುಗಳನ್ನು ಹತ್ತಿಕ್ಕಿ ಸುಮ್ಮನಾಗಿ. ಇಲ್ಲದಿದ್ದರೆ, ಈ ಒಂದು ಮೂರ್ಖ ತನಕ್ಕಾಗಿ ಮುಂದೆ ಬಾಳಿನುದ್ದಕ್ಕೂ ದಂಡ ತೆರಬೇಕಾದೀತು!'

ನಮ್ಮ ಜಾತಿಯವರೂ ಹಾಗೆಯೇ. ಚಿಕ್ಕವರು ನಮ್ಮನ್ನು ನೋಡಿ ನಕ್ಕರು; ದೊಡ್ಡವರು ನಿಂದಿಸಿದರು, ಬೈದರು. ಆದರೆ ಹರೆಯ ಇದಕ್ಕೆಲ್ಲ ಅಳುಕುತ್ತದೆಯೋ? ಪ್ರಾಯಕ್ಕೆ ತನ್ನದೇ ಆದ ಒಂದು ಬಗೆಯ ಬುದ್ಧಿವಂತಿಕೆ ಇರುತ್ತದೆ........ಮದುವೆಯ ದಿನವೂ ಬಂತು. ಆದರೆ ಮದುವೆಯ ದಿನ ರಾತ್ರಿ ಮಲಗಲು ಜಾಗವೆಲ್ಲಿ ಎಂದು ಕೂಡಾ ನಮಗೇ ಗೊತ್ತಿರಲಿಲ್ಲ!

'ಹೊಲಕ್ಕೆ ಹೋಗೋಣ'—ಈದಾ ಸೂಚಿಸಿದಳು, 'ಏಕಾಗಬಾರದು? ದೇವ ಮಾತೆ ಎಲ್ಲಿದ್ದರೂ ಹರಸುತ್ತಾಳೆ'.

ಅಂತೂ ಕೊನೆಯಲ್ಲಿ ನಾವು ನಿರ್ಧರಿಸಿದೆವು, ಭೂಮಿಯೇ ನಮಗೆ ಹಾಸಿಗೆ ಆಕಾಶವೇ ಹೊದಿಕೆಯಾಗಲಿ ಎಂದು!.........

ಹ್ಞು!—ಈಗ ಇನ್ನೊಂದು ಕತೆ ಆರಂಭವಾಗುತ್ತದೆ ಕೇಳಿ, ನೀವೆಲ್ಲರೂ ದಯ ವಿಟ್ಟು ಕೇಳಬೇಕು. ಏಕೆಂದರೆ ನನ್ನ ಈ ಜೀವನದಲ್ಲೆಲ್ಲ ಮುಖ್ಯವಾದ ಕತೆ ಇದು!

ನಮ್ಮ ಮದುವೆಯ ಹಿಂದಿನ ದಿನ ಬೆಳಿಗ್ಗೆ ನಮ್ಮ ನೆರೆಯವನಾದ ಮುದುಕ ಗಿಯೊವನಿ ನನ್ನ ಹತ್ತಿರಕ್ಕೆ ಬಂದ. ಅದಕ್ಕೆ ಹಿಂದೆ ಅವನಿಗೆ ನಾನು ಬೇಕಾದಷ್ಟು ಕೆಲಸ ಮಾಡಿಕೊಟ್ಟಿದ್ದೆ. ಆತ ನನ್ನ ಹತ್ತಿರ ಬಂದು ಕೆಳ ಉಸಿರಿನಲ್ಲೆ ಗೊಣಗತೊಡಗಿದ— ಅಂಥ ಹುಲು ಮಾತುಗಳನ್ನು ಹೇಳುವುದಾದರೂ ಹೇಗೆ ಎಂಬ ಸಂದೇಹ ಆತನಿಗೆ— ಹೇಗೋ ಕಷ್ಟದಿಂದ ಹೇಳಿದ:

'ಈ ನನ್ನ ಕುರಿ ಹಟ್ಟಿಯನ್ನೇ ಸ್ವಲ್ಪ ಸ್ವಚ್ಛ ಮಾಡಿಕೋ; ಆಮೇಲೆ ಸ್ವಲ್ಪ

ಒಳ್ಳೇ ಒಣಹುಲ್ಲನ್ನು ಹಾಸು. ಇಲ್ಲಿ ಕುರಿಗಳನ್ನು ಕಟ್ಟಿನೆ ಒಂದು ವರ್ಷದ ಮೇಲಾಯಿತು. ನೆಲವೂ ಚೆನ್ನಾಗಿ ಒಣಗಿದೆ. ಆದರೆ ಚೊಕ್ಕವಾಗಿ ತೊಳೆದುಕೊಳ್ಳಬೇಕು. ನೀನೂ ಈದಾ ಇಲ್ಲೇ ಇರಬಹುದು.'

ಹೀಗೆ ನಮ್ಮ ಮನೆ ತಯಾರಾಗಿಯೇಹೋಯಿತು !

ನನ್ನಷ್ಟಕ್ಕೇ ಹಾಡಿಕೊಳ್ಳುತ್ತ ಆ ಕುರಿ ಹಟ್ಟಿಯನ್ನು ಸ್ವಚ್ಛ ಮಾಡುತ್ತಿರುವಾಗ ಯಾರೋ ಬಂದಹಾಗೆ ಕಂಡಿತು. ತಲೆಯೆತ್ತಿ ನೋಡಿದರೆ, ಬಡಗಿ ಕಾಸ್ಟಾನ್‌ಜೊ ಬಾಗಿಲಲ್ಲಿ ನಿಂತಿದ್ದ.

'ಹಾಗಾದರೆ ನೀನು ಮತ್ತು ಈದಾ ಇಲ್ಲೇ ಇರುವುದು ನಿಶ್ಚಯವಾಯಿತಲ್ಲ ? ಆದರೆ ನಿಮಗೆ ಮಲಗಲು ಸ್ಥಳ ?......ನನ್ನ ಹತ್ತಿರ ಒಂದು ಮಂಚ ಹೆಚ್ಚಾಗಿದೆ. ಇಲ್ಲಿ ಸ್ವಚ್ಛ ಮಾಡಿಯಾದ ಮೇಲೆ ಆಕಡೆ ಬಾ. ಆ ಮಂಚವನ್ನು ತರುವಿಯಂತೆ'.

ಕೆಲಸ ಮುಗಿಸಿ ನಾನು ಅವನ ಮನೆ ಕಡೆಗೆ ಹೋಗುತ್ತಿದ್ದಾಗ ದಾರಿಯಲ್ಲಿ ಅಂಗಡಿಯಿಟ್ಟುಕೊಂಡಿದ್ದ ಜಿಪುಣೆ ಮೇರಿಯಾ ಕೂತಲ್ಲಿಂದಲೇ ಕಿರುಚಿದಳು :

'ಹ್ಞ ! ಮದುವೆಯಾಗುತ್ತೀರಂತೆ, ಹುಚ್ಚರು ! ಒಂದು ಹಾಸಿಗೆಯಿಲ್ಲ, ಹೊದಿಕೆಯಿಲ್ಲ ಹೆಸರಿಗೆ ! ಒಕ್ಕಣ್ಣ, ನಿನಗೆ ಹುಚ್ಚು ಹಿಡಿದಿರಬೇಕು. ಹಾಳಾಗಲಿ !........ನಿನ್ನ ಈದಾಳನ್ನಾದರೂ ಇಲ್ಲಿಗೆ ಕಳಿಸು........'

ವಾತರೋಗದಿಂದ ಜೀರ್ಣವಾಗಿ ನರಳುತ್ತಿದ್ದ ಕುಂಟರೋಗಿ ವಿಯಾನೊ ತನ್ನ ಮನೆ ಹೊಸಿಲಿನಿಂದಲೇ ಆಕೆಗೆ ಕೂಗಿ ಹೇಳಿದ :

'ಕೇಳು ಅವನನ್ನು, ಮದುವೆಯ ದಿನ ಮನೆಗೆ ಬರುವವರಿಗೆ ಕೊಡಲು ಸಾರಾಯಿ ಎಷ್ಟು ಇಟ್ಟಿದ್ದಾನೆ? ಥೂ ! ಜನ ಅದು ಹೇಗೆ ಅಷ್ಟೊಂದು ಮೂರ್ಖರಾಗುತ್ತಾರೋ!'"

ಆ ಮುದುಕನ ಕೆನ್ನೆಯ ಆಳವಾದ ನೆರಿಗೆಯೊಂದರಲ್ಲಿ ಒಂದು ತೊಟ್ಟು ಕಣ್ಣೀರು ಮಿಂಚುತ್ತಿತ್ತು ; ತಲೆಯನ್ನು ಹಿಂದಕ್ಕೆ ಕೊಡವಿ ಸದ್ದಿಲ್ಲದೆ ನಗತೊಡಗಿದ್ದ. ಆತನ ಸೇಬಿನಂಥ ಗಲ್ಲ ಆಚೀಚೆ ಆಡುತ್ತಿತ್ತು ; ದೇಹದ ಸಡಿಲು ಚರ್ಮ ಕಂಪಿಸುತ್ತಿತ್ತು.

"ಓಹ್ ! ಏನು ಮಾಡುವುದು ಸ್ವಾಮಿ !"—ಉಕ್ಕಿ ಬರುವ ನಗುವಿನ ಮಧ್ಯೆ ಆತನಿಗೆ ಮಾತೇ ಹೊರಡುತ್ತಿರಲಿಲ್ಲ. ಹಸುಳೆಯಂತೆ ಹರ್ಷದಿಂದ ಸ್ವೇಚ್ಛೆಯಾಗಿ ನಗುತ್ತ, ಕೈಗಳನ್ನು ಮೆಲ್ಲಗೆ ಸರಿಸಿ ಮುಂದುವರಿಸಿದ : "ನಮ್ಮ ಮದುವೆಯ ದಿನ ಬೆಳಗಾಗುವ ಹೊತ್ತಿಗೆ ನಮ್ಮ ಸಂಸಾರಕ್ಕೆ ಬೇಕಾಗುವ ಸಲಕರಣೆಗಳೂ ತಯಾರಾಗಿದ್ದವು. ದೇವಮಾತೆಯ ವಿಗ್ರಹ, ತಟ್ಟು, ಬಟ್ಟಲು, ಪಾತ್ರೆ, ಬಟ್ಟೆ, ಮೇಜು, ಕುರ್ಚಿ, ಮಂಚ —ದೇವರಾಣೆ ಮಾಡಿ ಹೇಳುತ್ತೇನೆ, ಎಲ್ಲವೂ ಅಣಿಯಾಗಿದ್ದವು ! ಈದಾ ಮನಬಂದಂತೆ ನಕ್ಕಳು, ಅತ್ತಳು. ನಾನೂ ಹಾಗೇ. ಮತ್ತೆ ಉಳಿದವರೆಲ್ಲ ನಕ್ಕರು—ಮದುವೆಯ ದಿನ ಅಳುವುದು ಕೆಟ್ಟದ್ದು, ಅಲ್ಲವೆ ? ನಮ್ಮ ಜನರೆಲ್ಲ ನಮ್ಮಿಬ್ಬರನ್ನು ನೋಡಿ ನಗುತ್ತಿದ್ದರು !

ಸ್ವಾಮಿ, ಜನರನ್ನು ನಮ್ಮವರೆಂದು ಕರೆಯುವ ಹಕ್ಕು ಸಾಮಾನ್ಯವಾದ್ದಲ್ಲ—ಓಹ್ ! ಅದಕ್ಕಿಂತ ಹೆಚ್ಚಾದ ಸಂತೋಷ ಇನ್ನಾವುದೂ ಇಲ್ಲ. ಇಲ್ಲವೇ ಇಲ್ಲ ಸ್ವಾಮಿ ! ಅಲ್ಲದೆ—ನಮ್ಮ ಜೀವನವನ್ನು ಅಲ್ಪವೆಂದು, ಆಟದ ವಸ್ತುವೆಂದು ಎಂದೂ ಭಾವಿಸದ ಜನಗಳನ್ನು, ನಮಗೆ ತೀರಾ ಹತ್ತಿರದವರೆಂದು ಪ್ರಿಯರೆಂದು ತಿಳಿದು ಅವರು ನಮ್ಮವರೇ ಎಂದು ಅನುಭವಿಸುವುದಂತೂ ಹಬ್ಬ !

............ಹ್ಞು ! ಎಂಥ ಮದುವೆ ಎನ್ನುತ್ತೀರಿ !—ಓ, ಎಂಥ ದಿನ ಅದು ! ........ಮದುವೆಗೆ ನಮ್ಮ ಜನರೆಲ್ಲ ಬಂದು ಕೂಡಿದ್ದರು. ಒಬ್ಬರೂ ಬಿಡದೆ ಪ್ರತಿಯೊಬ್ಬರೂ ಅಲ್ಲಿ ಬಂದು ಕೂಡಿದ್ದಾಗ, ಅದನ್ನು ನೋಡಬೇಕಿತ್ತು ! ಆ ಸಣ್ಣ ಹಟ್ಟಿ ಶ್ರೀಮಂತರ ಭವನವಾಗಿಹೋಗಿತ್ತು !...............ನಮಗೆ ಬೇಕೆಂಬುದೆಲ್ಲ ಬೇಕೆಂಬಂತೆ ಅಣಿಯಾಗಿತ್ತು. ಸಾರಾಯಿ, ಹಣ್ಣು, ಮಾಂಸ, ರೊಟ್ಟಿ—ಎಲ್ಲವೂ. ಎಲ್ಲರೂ ತಿಂದರು ; ಎಲ್ಲರೂ ಸಂತೋಷದಿಂದ ಕುಣಿದಾಡುತ್ತಿದ್ದರು.........ಇದು, ಸ್ವಾಮಿ, ಏತಕ್ಕೆಂದರೆ—ಜನಗಳಿಗೆ ಒಳ್ಳೆಯದನ್ನು ಮಾಡುವುದಕ್ಕಿಂತ ಹೆಚ್ಚಿನ ಮತ್ತೊಂದು ಸಂತೃಪ್ತವೇ ಇಲ್ಲ. ನಾನು ಹೇಳುತ್ತೇನೆ, ನನ್ನ ಮಾತನ್ನು ನಂಬಿ. ಅದಕ್ಕಿಂತ ಒಳ್ಳೆಯದಾದ್ದು ಸುಂದರವಾದ್ದು ಬೇರೆ ಇಲ್ಲವೇ ಇಲ್ಲ !

ತುದಿಗೆ ಪುರೋಹಿತರೂ ಬಂದರು. ಅವರು ಒಂದು ಚಿಕ್ಕ ಭಾಷಣವನ್ನೂ ಮಾಡಿದರು ! 'ನೋಡಿ, ಈ ಇಬ್ಬರು ನಿಮ್ಮೆಲ್ಲರಿಗೂ ದುಡಿದವರಾಗಿದ್ದಾರೆ ; ಅಂತೆಯೇ ಅವರ ಬಾಳಿನ ಈ ಆನಂದದ ದಿವಸ ಎಂದೆಂದಿಗಿಂತಲೂ ಹೆಚ್ಚು ಸುಖಕರವಾಗುವಂತೆ ನೀವೆಲ್ಲ ಕೈಲಾದಷ್ಟು ಬಗೆಯಿಂದ ಶ್ರಮಿಸಿದ್ದೀರಿ. ಇದು ಸರಿಯಾದದ್ದೇ ಆಗಿದೆ. ಕಾರಣ, ಅವರು ನಿಮಗಾಗಿ ದುಡಿದಿದ್ದಾರೆ. ಕಾರ್ಯಕ್ಕೆ ಅತ್ಯುತ್ತಮವಾದ ಪ್ರತಿಫಲ ಕಾರ್ಯವೇ ಅಲ್ಲದೆ, ತಾಮ್ರ ಅಥವಾ ಬೆಳ್ಳಿ ಚೂರಲ್ಲ. ಕಾರ್ಯಕ್ಕೆ ತಕ್ಕುದಾದ ಬೆಲೆ ಕಾರ್ಯವೇ ಅಲ್ಲದೆ ಬೇರೊಂದಲ್ಲ. ಕಾಸು ಸುಲಭವಾಗಿ ಕರಗಿಹೋಗುತ್ತದೆ. ಆದರೆ ಕೊನೆಯ ತನಕ ಉಳಿದು ಬರುವುದು ಕಾರ್ಯ ಮಾತ್ರ.........ಇವರು ಸಭ್ಯರು, ಸಂತೋಷದಿಂದ ಬಾಳುವವರು. ಅವರ ಜೀವನ ಇಷ್ಟು ಕಷ್ಟಮಯವಾಗಿದ್ದರೂ ಹಾಗೆ ಹೀಗೆಂದು ಅವರು ಗೊಣಗಲಿಲ್ಲ. ಅವರ ಬಾಳು ಇನ್ನೂ ಕಷ್ಟಮಯವಾಗಬಹುದು, ಆದರೆ ಅದಕ್ಕಾಗಿ ಅವರೆಂದಿಗೂ ಗೊಣಗತಕ್ಕವರಲ್ಲ. ಅಲ್ಲದೆ, ಈಗ ಬೇರೆ, ನೀವೆಲ್ಲರೂ ಅಗತ್ಯವಾಗಿ ಒದಗಿಕೊಳ್ಳುತ್ತೀರಿ, ಅವರಿಗೆ ದುಡಿಯುವ ಕೈಯಿದೆ, ಅನುಭವಿಸಬಲ್ಲ ಗಟ್ಟಿಯಾದ ಹೃದಯವಿದೆ !'

ಇಷ್ಟೇ ಅಲ್ಲದೆ, ನನ್ನನ್ನು ಈದಾಳನ್ನು ಮತ್ತು ನಮ್ಮ ಜೊತೆಯ ಜನಗಳನ್ನು ಎಷ್ಟೆಷ್ಟೋ ಹೊಗಳಿ ಮಾತಾಡಿದರು ಅನ್ನಿ !"

ಕಳೆದ ಯೌವನವನ್ನು ಮತ್ತೆ ತುಂಬಿಕೊಂಡು ಉರಿಯುವ ಒಂದೇ ಕಣ್ಣಿನಿಂದ ನಮ್ಮೆಲ್ಲರನ್ನೂ ಒಮ್ಮೆ ನೋಡಿ ಹೇಳಿದ ಮಂದುಂಕ:

"ಕೇಳಿದಿರಾ ಸ್ವಾಮಿ ? ಏನೋ ಜನಗಳ ಬಗ್ಗೆ ಸ್ವಲ್ಪ ಹೇಳಿದ್ದೇನೆ........ಕಥೆ ಚೆನ್ನಾಗಿದೆ ಅಲ್ಲವಾ ?"

## ೬ ತೈಮೂರನ ಸೋಲು

ಹೆಣ್ಣನ್ನು, ವಿಶ್ವವಿಜಯೀ ಸಂಜೀವನಸ್ಯಂದಿಯಾದ ತಾಯಿಯನ್ನು ಉನ್ನತ ಕಂಠದಲ್ಲಿ ಹಾಡಿ ಹೊಗಳೋಣ!

ಜಗತ್ತೆಲ್ಲವನ್ನೂ ನಾಶಮಾಡಲು ಹಂಬಲಿಸಿದ ತೈಮೂರ್‌ಲೇನನ, ಅದೃಷ್ಟಶಾಲಿ ವಿಜೇತ ವಜ್ರಹೃದಯದ ಕುಂಟ ಹುಲಿ ತೈಮೂರ್-ಇ-ಲಂಗ್‌ನ ಕಥೆ ಇದು :

ಐವತ್ತು ವರ್ಷಗಳ ಕಾಲ ಸತತವಾಗಿ ಈ ಭೂಮಿಯ ಮೇಲೆ ಆತನ ಪದಾಘಾತ ನಡೆಯಿತು. ಎಣಿಕೆಯಿಲ್ಲದಷ್ಟು ನಗರಗಳು ಪ್ರಾಂತ್ಯಗಳು ಆತನ ಉಕ್ಕಿನ ಅಡಿಯಲ್ಲಿ ಸಿಕ್ಕು, ಆನೆಯ ಕಾಲ ಕೆಳಗಿನ ಹುತ್ತದ ಹಾಗೆ ದೂಳೀಪಟವಾದವು. ಅವನ ಕೀರ್ತಿಯ ಜಾಗರದಲ್ಲಿ ಮಾನವರಕ್ತದ ಅರುಣ ಪ್ರವಾಹಗಳು ದಶದಿಕ್ಕುಗಳಲ್ಲಿಯೂ ಹರಿಯ ತೊಡಗಿದವು. ಸಂಖ್ಯೆಯಿಲ್ಲದಷ್ಟು ಜನಗಳನ್ನು ನಾಶಮಾಡಿ ಅವರ ಎಲುಬಿನ ರಾಶಿಯಿಂದಲೇ ಗಗನಸ್ತೂಪಗಳನ್ನು ನಿರ್ಮಿಸಿದ. ಲೆಕ್ಕವಿಲ್ಲದಷ್ಟು ಬಾಳುಗಳನ್ನು ಹಿಸುಕಿ ಹಾಕಿದ. ತನ್ನ ಮಗ ಜಿಹಾಂಗೀರನ ಸಾವೇ ಕಾರಣವಾಗಿ, ಮೃತ್ಯುವಿನ ಮೇಲಿನ ಸೇಡಿನಿಂದ ಅದರ ಶಕ್ತಿಯನ್ನೂ ಮೀರಿಸಿ ಅತಿವೇಗವಾಗಿ ತನ್ನ ಬಲವನ್ನು ವಿಸ್ತರಿಸಿದ. ದೈತ್ಯಮಾನವ! ಮೃತ್ಯುವಿನ ಆಹಾರವೆಲ್ಲವನ್ನೂ ಸುಲಿದು ಅದು ಹಸಿವಿನಿಂದ ಎದೆಯೊಡೆದು ಸಾಯುವಂತೆ ಮಾಡಲು ಹಂಬಲಿಸಿದ!

ತನ್ನ ಮಗ ಜಿಹಾಂಗೀರ್ ಸತ್ತಂದಿನಿಂದ—ಸಮರ್‌ಖಂಡದ ಜನಗಳು ಕಪ್ಪು ಬಟ್ಟೆಯನ್ನು ಧರಿಸಿ ತಲೆಯಮೇಲೆ ದೂಳು ಬೂದಿಗಳನ್ನು ಸುರಿದು ತನ್ನ ಭೇಟಿಗಾಗಿ ಬರುತ್ತಿದ್ದ ಆ ದಿನದಿಂದ, ತಾನೇ ಮೃತ್ಯುವನ್ನು ಸಂಧಿಸಿ ಸೆಣಸಿದ ದಿನದವರೆಗೂ ಆತ ಒಂದು ಬಾರಿ ಕೂಡ ನಗಲಿಲ್ಲ. ತುಟಿಗಳನ್ನು ಬಿಗಿದು, ತಲೆಯನ್ನು ಮಣಿಸದೆ, ಮೋಹ ಮಮತೆಗಳಿಗೆ ಪಕ್ಕಾಗದಂತೆ ಎದೆಯನ್ನು ವಜ್ರ ಕವಾಟದಲ್ಲಿರಿಸಿಕೊಂಡು ಬದುಕಿದ—ಮೂವತ್ತು ದೀರ್ಘ ವರ್ಷಗಳ ಪರ್ಯಂತ!

ಹೆಣ್ಣನ್ನು, ಮೃತ್ಯುವೂ ವಿನೀತಭಾವದಿಂದ ಶರಣಾಗಿ ಮಣಿಯುವ ಸರ್ವ ಶಕ್ತಿಯ ಏಕಮಾತ್ರ ಪ್ರತಿಮೆಯಾದ ತಾಯಿಯನ್ನು ಉನ್ನತ ಕಂಠದಿಂದ ಹಾಡಿ ಹೊಗಳೋಣ! ಈ ನೆಲದ ಶಕ್ತರಾಕ್ಷಸನಾದ, ಮೃತ್ಯುವಿನ ಗುಲಾಮನಾದ ಪಾಷಾಣ ಹೃದಯಿ ತೈಮೂರನೂ ಆಕೆಗೆ ಮಣಿಯಬೇಕಾಯಿತು.

......ಹೀಗೆ ಒದಗಿತು ಆ ಪ್ರಸಂಗ: ಕನಿಗುಲಾದ ಸುಂದರ ಕಣಿವೆಯಲ್ಲಿ ತೈಮೂರ್ ಬೀಡುಬಿಟ್ಟು ಹಬ್ಬ ನಡೆಸುತ್ತಿದ್ದ ಸಮಯ. ಎಂಥ ಚೆಲುವಾದ ಪ್ರದೇಶ ವದು! ಸಮರ್ ಖಂಡದ ಕವಿಗಳು ಅದನ್ನು 'ಹೂವಿನ ಕಣಿವೆ'ಯೆಂದು ಹೆಸರಿಸಿದ್ದರು. ಜಾಜಿ ಗುಲಾಬಿ ಮೊದಲಾದ ಬಗೆಬಗೆಯ ಹೂಗಳ ಕಂಪು ಮೋಡವಾಗಿ ಅಲ್ಲಿ ಅಲೆ ಯುತ್ತಿತ್ತು. ಮಹಾನಗರದ ನೀಲ ಗೋಪುರಗಳು, ಮಸೀದಿಯ ಗಗನ ಗುಮ್ಮಟಗಳು ಅಲ್ಲಿಂದ ದೂರದಲ್ಲಿ ತೇಲುತ್ತಿರುವ ಹಾಗೆ ಕಾಣುತ್ತಿದ್ದವು.

ಅರ್ಧಚಂದ್ರಾಕೃತಿಯಾಗಿ ಹದಿನೈದು ಸಾವಿರ ಹಸಿರು ಡೇರೆಗಳು ಆ ಕಣಿವೆಯಲ್ಲಿ ನಿರ್ಮಿತವಾಗಿದ್ದವು, ಹದಿನೈದು ಸಾವಿರ ಪೊದೆಗಳು ಹೂಬಿಟ್ಟು ನಿಂತ ಹಾಗೆ! ಒಂದೊಂದು ಡೇರೆಯ ಮೇಲಿನ ನೂರಾರು ಧ್ವಜಗಳು ಬಣ್ಣ ಬಣ್ಣದ ಹೂವುಗಳಂತೆ ತೀಡುವ ಗಾಳಿಯಲ್ಲಿ ಪಟಗುಟ್ಟುತ್ತಿದ್ದವು.

ಚೆಲುವಿಯರು ಬಳಸಿ ನಿಂತ ರಾಣಿಯಂತೆ, ಅರ್ಧಚಂದ್ರಾಕೃತಿಯ ಮಧ್ಯೆ ಮುಂಗಿಲಿಗೆ ತಲೆಯೆತ್ತಿ ನಿಂತಿತ್ತು ತೈಮೂರನ ಚೆಲುವಾದ ಡೇರೆ. ನಾಲ್ಕು ಮೂಲೆಗಳ ವಿಸ್ತಾರವಾದ ವಸ್ತ್ರಗೃಹ ಅದು. ಒಂದೊಂದು ಬದಿಯೂ ನೂರು ಮಾರುಗಳ ಉದ್ದ; ಮೂರು ಆಳು ಎತ್ತರ; ನಟ್ಟ ನಡುವೆ ಆಧಾರವಾಗಿ ನಿಂತ ಆಳು ದಪ್ಪದ ಹನ್ನೆರಡು ಸ್ವರ್ಣಸ್ತಂಭಗಳು; ಮುಡಿಯಲ್ಲಿ ತಿಳಿನೀಲದ ಸುಂದರ ಗೊಮ್ಮಟ; ಸುತ್ತಲೂ ಕಪ್ಪು ಹಳದಿ ನೀಲವರ್ಣಗಳ ರೇಸಿಮೆಯ ಬಟ್ಟೆಗಳು ಇಳಿಬಿದ್ದಿರುವ ವಸ್ತ್ರಭಿತ್ತಿಗಳು; ನಾಲ್ಕು ಮೂಲೆಯ ಮೇಲುಭಾಗದಲ್ಲೂ ನಾಲ್ಕು ರಜತಪಕ್ಷಿಗಳು. ಡೇರೆ ಮುಗಿಲಿಗೆ ಹಾರಿ ಹೋಗದಂತೆ ಐದುನೂರು ಕೆಂಪುದಾರಗಳು ಅದನ್ನು ನೆಲಕ್ಕೆ ಬಿಗಿದಿದ್ದವು. ಗುಮ್ಮಟದ ಕೆಳಭಾಗದಲ್ಲಿ, ಡೇರೆಯ ನಟ್ಟನಡುವಿನ ಸ್ವರ್ಣವೇದಿಕೆಯ ಮೇಲೆ ಸ್ವತಃ ಕುಳಿತು ಕೊಳ್ಳುತ್ತಿದ್ದ ತೈಮೂರ್—ಅಜೇತ ಮಾನವ, ರಾಜರ ರಾಜ!

ಐದು ಸಾವಿರ ತೋರ ಮುತ್ತುಗಳನ್ನು ರತ್ನಮಾಣಿಕ್ಯಗಳನ್ನು ಹೆಣೆದು ನೀರಾಗಿ ಕರಗಿ ಇಳಿಯುತ್ತಿರುವಂತೆ ತೋರುವ ದಿವ್ಯವರ್ಣದ ನಯವಾದ ರೇಸಿಮೆಯ ಉಡಿಗೆ ಯನ್ನು ಧರಿಸಿ ಅಂದು ಅಲ್ಲಿ ಕುಳಿತಿದ್ದ, ತೈಮೂರ್. ಆತನ ಭಯಂಕರವಾದ ನರೆತ ಹುಬ್ಬುಗಳ ಮೇಲುಭಾಗದಲ್ಲಿ ಕೊಕ್ಕು ಚಾಚಿದ ಕಿರೀಟವೊಂದು ಶೋಭಿಸುತ್ತಿತ್ತು. ಅಲ್ಲಿ ಸಿಲುಕಿದ ಮಾಣಿಕ್ಯವೊಂದು, ಜಗತ್ತೆಲ್ಲವನ್ನೂ ಸಿಂಹಾವಲೋಕನ ಮಾಡುತ್ತಿರುವ ರಕ್ತವರ್ಣದ ಕಣ್ಣಿನಂತೆ ಅತ್ತಿತ್ತ ತೂಗಾಡುತ್ತಿತ್ತು.

ಸಾವಿರ ಸಲ ನೆತ್ತರಿನಲ್ಲಿ ಮುಳುಗಿ ಅದರಿಂದ ತುಕ್ಕು ಹಿಡಿದ ಅಗಲವಾದ ಅಲು

ಗಿನ ಕತ್ತಿಯಂತೆ ಕಾಣುತ್ತಿತ್ತು ತೈಮೂರನ ಮುಖ. ಆತನ ಚಿಕ್ಕದಾದ ಗುಳಿಗಣ್ಣುಗಳಿಗೆ ಅದೃಶ್ಯವಾದ ವಸ್ತುಗಳೇ ಇರಲಿಲ್ಲ. ಅರಬ್ ಜನರು ಅನರ್ಘ್ಯವೆಂದು ರೋಗನಾಶಕ ವೆಂದು ಪರಿಗಣಿಸುವ 'ಜರಮುತ್' ರತ್ನದ ಕೋಡುಮಿಂಚಿನ ಹಾಗಿತ್ತು ಆತನ ಕಣ್ಣಿನ ಕಾಂತಿ. ಆತನ ಕಿವಿಗಳಲ್ಲಿ ಚೆಲುವಿಯ ಚೆಂದುಟಿಯ ಬಣ್ಣದ ಮಾಣಿಕ್ಯಗಳು ತೂಗಾಡು ತ್ತಿದ್ದವು.

ಇನ್ನಿಲ್ಲದ ಗಾಢಡಿಯಿಂದ ಕಂಗೊಳಿಸುವ ಚಿತ್ರವಿಚಿತ್ರ ಜಮಖಾನಗಳನ್ನು ಹಾಸಿ ಸಿಂಗರಿಸಿದ ಡೇರೆಯ ನೆಲದ ಮೇಲೆ ಮದ್ಯವನ್ನು ತುಂಬಿದ ಮುನ್ನೂರು ಸ್ವರ್ಣ ಕುಂಭ ಗಳು ಅಣಿಯಾಗಿದ್ದವು. ರಾಜೋಚಿತವಾದ ಔತಣಕ್ಕೆ ಸರ್ವ ಸಿದ್ಧತೆಯೂ ನಡೆದಿತ್ತು. ತೈಮೂರನ ಆಚೀಚೆಯ ಪಕ್ಕದಲ್ಲಿ ಸ್ಥಳ ತೆರವಾಗಿತ್ತು ; ಆತನ ಹಿಂಭಾಗದಲ್ಲಿ ಸಂಗೀತ ಗಾರರು ಒಪ್ಪವಾಗಿ ಕುಳಿತುಕೊಂಡಿದ್ದರು ! ಅವನ ಕಾಲುಬುಡದಲ್ಲಿ ರಾಜರು, ರಾಜ ಬಂಧುಗಳು, ರಾಜಕುಮಾರರು, ಮಂತ್ರಿ ಸೇನಾಧಿಪತಿಗಳು ಸಾಲುಗಟ್ಟಿ ಕೂತಿದ್ದರು. ಜೊತೆಯಲ್ಲಿ ಆಸ್ಥಾನ ಕವಿ, ಕುಡುಕ ಕಿರ್ಮಾನಿಯೂ ಕೂತಿದ್ದ. ಜಗಜ್ಜೇತನಾದ ತೈಮೂರ್ ಒಮ್ಮೆ ಪ್ರಶ್ನಿಸಿದಾಗ ಹೀಗೆ ಉತ್ತರ ಕೊಟ್ಟಿದ್ದ, ಆ ಕಲಿ—ಕವಿ :

"ಕಿರ್‌ಮಾನಿ ! ನಾನು ನನ್ನನ್ನು ಮಾರಿಕೊಳ್ಳುವುದಾದರೆ ನೀನು ಎಷ್ಟು ಕೊಟ್ಟು ಕೊಳ್ಳಲು ಸಿದ್ಧನಿದ್ದೀಯೆ ?"

ಅದಕ್ಕೆ ಆ ಕುಡುಕ ಕವಿ ಉತ್ತರಿಸಿದ್ದ :

"ಇಪ್ಪತ್ತೈದು ಆಸ್ಕರುಗಳು".

"ನನ್ನ ನಡುಪಟ್ಟಿಯೊಂದಕ್ಕೇ ಅಷ್ಟು ಬೆಲೆಯಾಗುತ್ತದೆ !"—ತೈಮೂರ್ ಆಶ್ಚ ರ್ಯದಿಂದ ಉದ್ಗರಿಸಿದ್ದ.

"ನಿಜ ! ಬೆಲೆಯನ್ನು ಹೇಳುವಾಗ ನಾನು ಆ ನಡುಪಟ್ಟಿಯನ್ನೇ ಮನಸ್ಸಿನಲ್ಲಿ ಟ್ಟುಕೊಂಡಿದ್ದೆ ; ಆ ನಡುಪಟ್ಟಿಯನ್ನು ಮಾತ್ರ......ಕಾರಣ ನೀನು.........ಒಂದು ಫಾರ್ದಿಂಗ್ ಕೂಡಾ ಬಾಳುವುದಿಲ್ಲ !"

ಆ ಕುಡುಕ ಕವಿ ಕಿರ್ಮಾನಿ, ರಾಜರ ರಾಜನಿಗೆ, ಚಕ್ರವರ್ತಿ ಸಾರ್ವಭೌಮನಿಗೆ, ದುಷ್ಟನಾಗಿದ್ದ ಆ ಭಯಂಕರ ಮನುಷ್ಯನಿಗೆ ಹೀಗೆ ಉತ್ತರ ಕೊಟ್ಟಿದ್ದ. ಎಂದೆಂದಿಗೂ ತೈಮೂರನಂಥವರ ವೈಭವವನ್ನು ಮಣ್ಣುಗೂಡಿಸಿ ಬೆಳಗುತ್ತಿರಲಿ, ಈ ನಿರ್ಭೀತ ಕವಿಯ, ಸತ್ಯದ ಸ್ನೇಹಿತನ ದಿವ್ಯ ವೈಭವ !

ಸತ್ಯದ ಸುಂದರ ವಾಕ್ಕೆಂಬ ಒಬ್ಬನೇ ದೇವರನ್ನು ಮಾತ್ರ ಬಲ್ಲ—ಅದೇ ಎಂದೆಂದಿಗೂ ಅವರ ದೇವರಾಗಿರುವ—ನಿರ್ಭೀತರಾದ ಕವಿಪುಂಗವರ ವೈಭವವನ್ನು ಕುರಿತು ಹಾಡಿ ಹೊಗಳೋಣ !

ರಾಜ ಔತಣದ, ಆಸವಾಮೋದದ ಸಂತೋಷ ಸಮಯ ಅದು. ಯುದ್ಧ ವಿಜಯದ ಸಂತೋಷಸ್ಮರಣೆಗಳು ಸಾಲುಗಟ್ಟಿ ತೂರಾಡುತ್ತಿದ್ದ ಶಿಖರ ಸಮಯ.

ದೊರೆಯ ಎದುರಲ್ಲಿ, ಒಂದು ಕಡೆ ಸಂಗೀತದ ಮೊಳಗು ಮೊರೆಯುತ್ತಿರಲಾಗಿ ಇನ್ನೊಂದು ಕಡೆ ಆಟವಿನೋದಗಳು ಎಡೆಬಿಡದೆ ನಡೆಯುತ್ತಿದ್ದವು. ಬಣ್ಣಬಣ್ಣದ ಬಟ್ಟೆಯ ವಿದೂಷಕರು ದೊರೆಯನ್ನು ಬಳಸಿ ಕೂತಿದ್ದರು. ಜಟ್ಟಿಗಳು ತೋಳು ತೂಗಿ ಕುಸ್ತಿಗಾಗಿ ಹಾತೊರೆಯುತ್ತಿದ್ದರು. ಹಗ್ಗದ ಕಸರತ್ತು ಒಂದೆಡೆ ನಡೆದಿತ್ತು. ಬಿಗಿದು ಕಟ್ಟಿದ್ದ ಒಂದು ದಾರದ ಮೇಲೆ, ಎಲುಬೇ ಇಲ್ಲದವರಂತೆ ಮೈ ಬಳುಕಿಸಿ ನಡೆಯುವ ಆ ಕುಶಲ ಆಟಗಾರರನ್ನು ನೋಡಿದರೆ ಬೆರಗಾಗುವಂತಿತ್ತು. ಯೋಧರು ಕತ್ತಿ ಹಿರಿದು ಕೊಲ್ಲುವ ಆಟದಲ್ಲಿ ಎಣೆಯಿಲ್ಲದ ಚಾತುರ್ಯವನ್ನು ಮೆರೆಯುತ್ತಿದ್ದರು. ಕೆಂಪು ಹಸಿರು ಪಟ್ಟೆಗಳನ್ನು ಬರೆದು ಸಿಂಗರಿಸಿದ ಆನೆಗಳ ಜೊತೆ ಬಗೆಬಗೆಯ ಆಟಗಳು ಪ್ರದರ್ಶಿತ ವಾಗುತ್ತಿದ್ದವು. ಆ ಆನೆಗಳು ಕೆಲವು ಭಯಂಕರವಾಗಿ ತೋರಿದರೆ ಕೆಲವು ಹಾಸ್ಯಾಸ್ಪದ ವಾಗಿ ಕಾಣುತ್ತಿದ್ದವು.

ಇಂಥ ಹೊತ್ತಿನಲ್ಲಿ, ತೈಮೂರನ ಜನರು ಆತನ ಭಯದ ಬೆದರಿಕೆಯಿಂದ, ವೈಭವದ ಹೆಮ್ಮೆಯಿಂದ, ಜಯದ ಬೇಸರದಿಂದ, ಮದ್ಯದ ಅಮಲಿನಿಂದ ಪ್ರಮತ್ತ ರಾಗಿದ್ದ ಹುಚ್ಚು ವೇಳೆಯಲ್ಲಿ, ಆ ಗದ್ದಲದ ನಡುವೆ, ಗುಡುಗು–ಮೋಡದ ನಡುವಿನ ಮಿಂಚಿನ ಕಿರಣರೇಖೆಯಂತೆ ಒಮ್ಮೆಗೇ ಸೀಳಿಬಂತು, ಹೆಣ್ಣಿನ ಆರ್ತಸ್ವರ. ತನ್ನ ಮಗನ ಸಾವಿನಿಂದ ಘಾಸಿಯಾಗಿ ಆ ಕಾರಣದಿಂದಲೇ ಜೀವಂತ ಜನಗಳೆಲ್ಲರ ಮೇಲೂ ಕ್ರೂರ ವಾಗಿದ್ದ ತೈಮೂರನ ನೊಂದ ಆತ್ಮಕ್ಕೆ ಚಿರಪರಿಚಿತವಾಗಿದ್ದಂತೆ, ಸಮಶ್ರುತಿಯಾಗಿದ್ದಂತೆ ಕೇಳಿಸುತ್ತಿತ್ತು, ಹೆಣ್ಣುಹದ್ದಿನ ಆರ್ತಸ್ವರದಂತಿದ್ದ ಆ ಕೂಗು.

ತೈಮೂರ್ ತನ್ನ ಸೇವಕರಿಗೆ ಆಜ್ಞೆ ಮಾಡಿದ, ಇಂಥ ಆನಂದೋತ್ಸವದಲ್ಲಿ ಯಾರು ಹೊರಗೆ ಕೆಟ್ಟ ದನಿಯಲ್ಲಿ ಕಿರುಚುತ್ತಿರುವವರೆಂದು ನೋಡಲು. ಸೇವಕರು ನೋಡಿ ಬಂದು ಹೇಳಿದರು. ಯಾವಳೋ ಒಬ್ಬ ಹೆಂಗಸು—ಹುಚ್ಚು ಪ್ರಾಣಿ—ಹರಕು ಚಿಂದಿ ಯುಟ್ಟು ಮೈಯೆಲ್ಲ ದೂಳಿನ ಮಯವಾಗಿ ಬಂದು ನಿತ್ತಿದ್ದಾಳೆಂದು; ತನ್ನ ಅರಬ್ ಭಾಷೆಯಲ್ಲಿ ದೊರೆಯನ್ನು, ಅಷ್ಟ ದಿಕ್ಕುಗಳ ಚಕ್ರವರ್ತಿ ಸಾರ್ವಭೌಮನನ್ನು ತಾನು ನೋಡಲೇಬೇಕೆಂದು ಕಡ್ಡಾಯವಾಗಿ—ನಿಜ, ಕಡ್ಡಾಯವಾಗಿ—ಆಜ್ಞೆ ಮಾಡುತ್ತಿರುವ ಳೆಂದು.

"ಆಕೆಯನ್ನು ಒಳಗೆ ಕರೆದು ತನ್ನಿ !"—ದೊರೆ ಅಪ್ಪಣೆ ಮಾಡಿದ.

ಹಾಗೇ ಮರುಕ್ಷಣದಲ್ಲಿ ಹೆಣ್ಣೊಬ್ಬಳು ದೊರೆಯ ಮುಂದೆ ನಿಂತಿದ್ದಳು. ಬರಿ ಗಾಲು, ಬಿಸಿಲಲ್ಲಿ ಬಣ್ಣಗೆಟ್ಟ ಚಿಂದಿಯುಡಿಗೆ, ಬರಿದಾದ ಎದೆಯನ್ನು ಮುಚ್ಚಿಕೊಂಡ ಜಡೆಗಟ್ಟಿದ ಇಳಿಗೂದಲು, ಕಂಚಿನ ಬಣ್ಣದ ಮುಖ, ಗರ್ವದಿಂದ ಉರಿಯುವ ಕಣ್ಣು ಗಳು, ದೊರೆಯ ಕಡೆ ಚಾಚಿದ ನಿಷ್ಕಂಪಿತ ದೃಢ ಹಸ್ತಗಳು—ಇಂಥ ಹೆಣ್ಣು !

"ನೀನೇ ಅಲ್ಲವೇ ಬೆಯಜಿದ್ ಸುಲ್ತಾನನನ್ನು ನಾಶಮಾಡಿದ ದೊರೆ?" ಆಕೆ ಗಂಭೀರವಾಗಿ ಪ್ರಶ್ನಿಸಿದಳು.

"ನಿಜ, ಇನ್ನೂ ಅನೇಕರನ್ನು ನಾನು ನಿರ್ಮೂಲ ಮಾಡಿದ್ದೇನೆ. ಆದರೂ ದಂಡಯಾತ್ರೆಯೆಂದರೆ ಇನ್ನೂ ನನಗೆ ಬೇಸರವಿಲ್ಲ......ಅದಿರಲಿ, ನೀನು ಬಂದ ಕಾರಣವೇನು ? ನಿನ್ನ ಬಗ್ಗೆ ಏನಾದರೂ ಹೇಳಿಕೊಳ್ಳುವುದಿದ್ದರೆ ಹೇಳಿಕೊಳ್ಳಬಹುದು".

"ಹೇಳುತ್ತೇನೆ, ಕೇಳು", ಆಕೆ ಹೇಳಿದಳು : "ನೀನು ದೊರೆಯಾಗಿ ಏನನ್ನೇ ಸಾಧಿಸಿರಬಹುದು. ಆದರೂ ನೀನು ಮನುಷ್ಯ ಮಾತ್ರದವನು. ನಾನು ತಾಯಿ ! ನೀನು ಸಾವಿನ ಸೇವೆ ಮಾಡುತ್ತೀಯೆ ; ನಾನು ಬದುಕಿನ ಸೇವೆ ಮಾಡುತ್ತೇನೆ.........ನೀನು ನನ್ನ ಬಗ್ಗೆ ಪಾಪಕೃತ್ಯವನ್ನಾಚರಿಸಿದ್ದೀಯೆ. ಈ ತಪ್ಪನ್ನು ತಿದ್ದಿಕೊಳ್ಳುವಂತೆ ನಿನ್ನನ್ನು ಒತ್ತಾಯಿಸಲು ಬಂದಿದ್ದೇನೆ. 'ನ್ಯಾಯದಲ್ಲಿಯೇ ಶಕ್ತಿಯಿದೆ'—ಎಂಬುದು ನಿನ್ನ ತತ್ವವೆಂದು ನಾನು ಕೇಳಿದ್ದೇನಾದರೂ ಆ ಮಾತನ್ನು ನಂಬಿಕೊಂಡಿಲ್ಲ. ಏನಾದರೇನು, ನೀನು ನನ್ನ ವಿಷಯದಲ್ಲಿ ಮಾತ್ರ ನ್ಯಾಯವಾಗಿ ನಡೆದುಕೊಳ್ಳಲೇಬೇಕು. ಕಾರಣ ನಾನು ತಾಯಿ !"

ಈ ಮಾತುಗಳ ಹಿಂದೆ ಉರಿಯುತ್ತಿದ್ದ ಸತ್ಯವನ್ನು ಗುರುತಿಸಿಕೊಳ್ಳುವಷ್ಟು ಬುದ್ಧಿಯಿತ್ತು, ಆ ದೊರೆಗೆ.

"ಕೂತುಕೊಂಡು ನಿನ್ನ ವಿಷಯವನ್ನು ಹೇಳು. ನಾನು ಕೇಳಲು ಸಿದ್ಧನಿದ್ದೇನೆ !"

ಆ ಚಿತ್ರವಿಚಿತ್ರವಾದ ಜಮಖಾನೆಯ ಮೇಲೆ, ರಾಜ–ಮಹಾರಾಜರುಗಳ ನಡುವೆ ಓರಣವಾಗಿ ಕೂತುಕೊಂಡು ಆಕೆ ತನ್ನ ಕಥೆಯನ್ನು ಪ್ರಾರಂಭಮಾಡಿದಳು :

"ಇಲ್ಲಿಂದ ಬಹಳ ದೂರವಿರುವ ಸಲೆರ್ನೊ ಪ್ರಾಂತದವಳು ನಾನು. ಆ ಭಾಗಗಳನ್ನು ನೀನು ತಿಳಿದಿರಲಾರೆ! ನನ್ನ ತಂದೆ ಮೀನುಗಾರನಾಗಿ ಜೀವಿಸುತ್ತಿದ್ದವನು. ನನ್ನ ಗಂಡನೂ ಅದೇ ಕೆಲಸದಲ್ಲಿದ್ದ........ಸಂತೋಷದಿಂದ ಬದುಕುವವರೆಲ್ಲ ಚೆಲುವರಾಗಿಯೇ ಇರುತ್ತಾರೆ. ಅಂತೆಯೇ ನನ್ನ ಗಂಡನಾದರೂ ಸುಂದರನಾಗಿದ್ದ. ನನ್ನಿಂದಾಗಿಯೇ ಆತ ಅಷ್ಟು ಸುಖವಾಗಿದ್ದನೆನ್ನಬೇಕು ! ನಮಗೊಬ್ಬ ಮಗ ಹುಟ್ಟಿದ. ಜಗತ್ತಿನಲ್ಲೆಲ್ಲಾ ಒಬ್ಬನೇ ಚೆಲುವ ....."

"ನನ್ನ ಜಹಾಂಗೀರನಂತೆ", ವೃದ್ಧನಾಗಿದ್ದ ಆ ರಾಜಯೋಧ ಗುಣುಗುಟ್ಟಿದ !

"ಆ ಸೊಬಗು, ಆ ಬುದ್ಧಿ ಜಗತ್ತಿನಲ್ಲಿ ಇನ್ನಾರಿಗೂ ಇರುವುದಕ್ಕೆ ಸಾಧ್ಯವಿಲ್ಲ. ಆತನಿಗೆ ಇನ್ನೂ ಆರು ವರ್ಷಗಳು ತುಂಬುವುದರಲ್ಲಿದ್ದವು, ಅಷ್ಟು ಚಿಕ್ಕ ಪ್ರಾಯ. ಆಗೊಮ್ಮೆ ಸಾರರ್ಸಿನ ಹಡಗುಗಳ್ಳರು ನಮ್ಮ ತೀರಕ್ಕೆ ಬಂದು ನುಗ್ಗಿದರು. ಅವರು ನಮ್ಮ ಮೇಲೇರಿ ಬಂದು ನನ್ನ ತಂದೆಯನ್ನು ಸೀಳಿಹಾಕಿದರು ; ನನ್ನ ಗಂಡನನ್ನು ಕೊಂದು ತೇಗಿದರು ; ಎಷ್ಟೋ ಜನರನ್ನು ಇರಿದು ತೀರಿಸಿದರು, ನನ್ನ ಆರು ವರ್ಷದ ಸುಂದರ ಮಗುವನ್ನೂ ಕೊಂಡೊಯ್ದರು....ಆದಾಗಿ ನಾಲ್ಕು ವರ್ಷಗಳು ಕಳೆದವು. ಇಂದಿಗೂ, ಮೂಲೆ ಮೂಲೆಗಳನ್ನೂ ಬಿಡದೆ ನನ್ನ ಮಗನನ್ನು ಹುಡುಕುತ್ತ ನೆಲವನ್ನೆಲ್ಲ ಸುತ್ತುತ್ತಿದ್ದೇನೆ. ಬೆಯ್‌ಜಿದ್ ಸುಲ್ತಾನನ ಜನರು ಆ ಹಡಗುಗಳ್ಳರನ್ನು ಸೆರೆಹಿಡಿದರಂತೆ

ಈಗ ನೀನು ಬೆಯ್‌ಜಿದ್ ಸುಲ್ತಾನನನ್ನು ನಾಶಮಾಡಿ ಅವನ ಸರ್ವಸ್ವವನ್ನೂ ವಶಪಡಿಸಿ ಕೊಂಡಿದ್ದೀಯೇ. ಆದ್ದರಿಂದ, ಈಗ ನನ್ನ ಮಗ ನಿನ್ನ ಆಡಳಿತ ಭೂಮಿಯಲ್ಲೆ ಸೇರಿ ಕೊಂಡಿದ್ದಾನೆ. ನಿನಗೆ ತಿಳಿದಿರಬೇಕು, ಆತನೆಲ್ಲಿದ್ದಾನೆಂದು. ನೀನು ಆತನನ್ನು ಅಗತ್ಯ ವಾಗಿ ತಂದೊಪ್ಪಿಸಲೇ ಬೇಕು !"

ಅಲ್ಲಿ ಕೂತಿದ್ದ ಜನರೆಲ್ಲರೂ ನಗತೊಡಗಿದರು. ಸಹಜವಾಗಿ ತಾವೇ ಬುದ್ಧಿವಂತ ರೆಂದು ತಿಳಿದುಕೊಳ್ಳುವ ರಾಜರುಗಳು ಉದ್ಗರಿಸಿದರು :

"ಯಾವಳೋ ಹುಚ್ಚು ಹೆಂಗಸು !"

ಆ ರಾಜರುಗಳ ಹಾಗೇ ಅಲ್ಲಿದ್ದ ರಾಜಕುಮಾರರು, ರಾಜಬಂಧುಗಳು, ಸೇನಾಧಿಪತಿಗಳು ಎಲ್ಲರೂ ಅಭಿಪ್ರಾಯಪಟ್ಟರು, ನಕ್ಕರು.

ಕಿರ್ಮಾನಿಯೊಬ್ಬನೇ ಆ ಹೆಣ್ಣನ್ನು ಗಂಭೀರವಾಗಿ ಎವೆಯಿಕ್ಕದೆ ನೋಡುತ್ತಿದ್ದ. ತೈಮೂರ್ ಆಶ್ಚರ್ಯದಿಂದ ಆಕೆಯ ಕಡೆ ದೃಷ್ಟಿ ಬೀರಿದ.

"ನಿಜ. ಎಲ್ಲಾ ತಾಯಿಯರ ಹಾಗೇ ಆಕೆಯೂ ಹುಚ್ಚಿಯಾಗಿದ್ದಾಳೆ !" ಕುಡುಕ ಕವಿ ಕಿರ್ಮಾನಿ ಮೃದುವಾಗಿ ಹೇಳಿದ. ಶಾಂತಿಯ ಶತ್ರುವಾಗಿದ್ದ ದೊರೆ ಆ ತಾಯಿ ಯನ್ನು ಪ್ರಶ್ನಿಸಿದ :

"ಬಡ ಹೆಣ್ಣೆ ! ಸಮುದ್ರಗಳನ್ನು, ನದಿ ಪರ್ವತಗಳನ್ನು ದಾಟಿ ಭಯಂಕರವಾದ ಕಾಡುಗಳಲ್ಲಿ, ಆ ಅಜ್ಞಾತ ಪ್ರಾಂತದಿಂದ ಇಷ್ಟು ದೂರ, ಏಕಾಂಗಿಯಾಗಿ ಹೇಗೆ ಬಂದಿ ದ್ದೀಯೆ ? ಮೃಗಗಳಿಂದ, ಎಷ್ಟೋ ಸಲ ಮೃಗಗಳಿಗಿಂತ ಕ್ರೂರರಾಗುವ ಮನುಷ್ಯ ರಿಂದ ಯಾವ ಬಾಧೆಯೂ ಇಲ್ಲದೆ ನೀನು ಏಕಾಂಗಿಯಾಗಿ ಬಂದಿರುವುದು ಸೋಜಿಗ. ಮಾನವ ರಕ್ಷಣೆಯ ಏಕಮಾತ್ರ ಸಾಧನವಾದ ಆಯುಧವೂ ನಿನ್ನ ಹತ್ತಿರ ಇಲ್ಲ, ಅದಾ ದರೂ ಇದ್ದಿದ್ದರೆ ಅದನ್ನು ಧರಿಸುವ ತೋಳಿನಲ್ಲಿ ಬಲವಿರುವ ವರೆಗೆ ನಿರ್ಭೀತಳಾಗಿ ಇರಬಹುದಾಗಿತ್ತು. ಹೇಳು, ಅದನ್ನು ತಿಳಿದುಕೊಳ್ಳದೆ ನಾನು ನಿನ್ನ ಮಾತನ್ನು ನಂಬುವು ದಾದರೂ ಹೇಗೆ ! ಈ ಆಶ್ಚರ್ಯವನ್ನು ಬಿಡಿಸಿದಲ್ಲದೆ ನಾನು ನಿನ್ನ ಮಾತುಗಳನ್ನು ಅರ್ಥ ಮಾಡಿಕೊಳ್ಳಲಾರೆ !"

ಕಂಟಕಗಳನ್ನು ಮೆಟ್ಟಿ ವಿಶ್ವಜಗತ್ತನ್ನೆ ತನ್ನ ಎದೆ ಹಾಲಿನಿಂದ ಪಾಲಿಸುವ ಹೆಣ್ಣನ್ನು, ತಾಯಿಯನ್ನು ಹೊಗಳಿ ಹಾಡೋಣ !........ಮನುಷ್ಯನಲ್ಲಿರುವ ಚೆಲು ವೆಲ್ಲವೂ ಸೂರ್ಯನ ಕಿರಣಗಳಿಂದ ಮತ್ತು ತಾಯಿಯ ಎವೆ ಹಾಲಿನಿಂದ ಮಾತ್ರವೇ ಒದಗಿ ಬಂದದ್ದು. ಇದೇ ಬಾಳನ್ನು ಒಲವಿನಿಂದ ಕ್ಷಣ ಕ್ಷಣಕ್ಕೂ ಪ್ರಚೋದಿಸುವ ದಿವ್ಯ ಶಕ್ತಿ !

"ನನ್ನ ಅಲೆದಾಟದಲ್ಲಿ ನಡುವೆ ಒಂದು ಸಮುದ್ರ ನನಗೆ ಎದುರಾಯಿತು," ಆಕೆ ಉತ್ತರಿಸಿದಳು : "ಅಲ್ಲಿ ಹಲವಾರು ಸಣ್ಣ ಸಣ್ಣ ದ್ವೀಪಗಳಿದ್ದವು. ನೂರಾರು ಮೀನು ದೋಣಿಗಳು ಅಲ್ಲಿ ತೇಲುತ್ತಿದ್ದವು. ಕಡಲನ್ನು ದಾಟುವಾಗ ನನಗೆ ಕಷ್ಟವೇ ಕಾಣಲಿಲ್ಲ.

ಕಾರಣ ಪ್ರೇಮದಿಂದ ಹಂಬಲಿಸುತ್ತಿರುವವರಿಗೆ ಗಾಳಿ ತಾನಾಗಿ ನೆರವಾಗುತ್ತದೆ. ಕಡಲ ಕರೆಯಲ್ಲಿ ಹುಟ್ಟಿ ಬೆಳೆದವರಿಗೆ ಹೊಳೆಗಳನ್ನು ಈಜಿ ಬರುವುದೊಂದು ಕಷ್ಟವಲ್ಲ. ಬೆಟ್ಟಗಳು ?—ನಾನು ಅವನ್ನು ಗಮನಿಸಲೇ ಇಲ್ಲ !"

ಕುರುಕ ಕವಿ ಒಡನೆಯೇ ಹರ್ಷದಿಂದ ಉದ್ಗರಿಸಿದ: "ಪ್ರೇಮಿಸಿದವರಿಗೆ ಪರ್ವತವೂ ಕಣಿವೆಯಾಗುತ್ತದೆ !"

"ಹಾದಿಯಲ್ಲಿ ಭಯಂಕರವಾದ ಕಾಡುಗಳಿದ್ದವು, ನಿಜ. ಹಂದಿ, ತೋಳ, ಕರಡಿ ಮುಂತಾದ ಕ್ರೂರಮೃಗಗಳೂ ಎದುರಾದವು. ಒಂದು ಸಲವಂತೂ ಎರಡು ಭಾರೀ ಹುಲಿಗಳು ಕಟ್ಟೆದುರಿನಲ್ಲಿ ನಿಂತುಬಿಟ್ಟಿದ್ದವು, ನಿನ್ನ ಹಾಗೇ ಉರಿಗಣ್ಣುಗಳಿಂದ ಕ್ರೂರವಾಗಿ ನೋಡುತ್ತ. ಆದರೆ ಎಲ್ಲಾ ಮೃಗಗಳಿಗೂ ಹೃದಯವೊಂದಿದೆ. ಈಗ ನಿನಗೆ ಹೇಳುತ್ತಿರುವಂತೆ, ನಾನು ಅವುಗಳಿಗೂ ನನ್ನ ಕತೆಯನ್ನು ಹೇಳಿದೆ. ನಾನು ತಾಯಿ ಎಂದಾಗ ಅವು ನನ್ನನ್ನು ನಂಬಿದವು. ನನ್ನನ್ನು ಕಂಡು ಕನಿಕರಪಟ್ಟು ನಿಟ್ಟುಸಿರು ಬಿಡುತ್ತ ತಮ್ಮ ಹಾದಿ ಹಿಡಿದು ನಡೆದವು. ನಿನಗೆ ತಿಳಿದಿಲ್ಲವೆ—ಮೃಗಗಳೂ ತಮ್ಮ ಮಕ್ಕಳನ್ನು ಪ್ರೀತಿಸುತ್ತವೆಂದು ? ಮನುಷ್ಯರಿಗಿಂತ ಹೆಚ್ಚಾಗಿ ತಮ್ಮ ಜೀವಕ್ಕೆ ಸ್ವಾತಂತ್ರ್ಯಕ್ಕೆ ಹೋರಾಡುತ್ತವೆಂದು ?"

"ಸರಿಯಾದ ಮಾತಾಡಿದ್ದೀಯೆ," ತೈಮೂರ್ ಹೇಳಿದ, "ಎಷ್ಟೋ ಸಲ, ನನಗೆ ಚೆನ್ನಾಗಿ ಗೊತ್ತು, ಅವು ಮನುಷ್ಯರಿಗಿಂತ ಹೆಚ್ಚು ಗಾಢವಾಗಿ ಪ್ರೀತಿಸುತ್ತವೆ. ಹಾಗೇ ಮನುಷ್ಯರಿಗಿಂತ ಹೆಚ್ಚು ಶೌರ್ಯದಿಂದ ಹೋರಾಡುತ್ತವೆ !"

"ಮನುಷ್ಯರು !"—ಆಕೆ ಮಗುವಿನಂತೆ ಹೇಳಿದಳು, ಕಾರಣ ಎಲ್ಲ ತಾಯಂದಿರೂ ಎದೆಯಾಳದಲ್ಲಿ ನೂರುಮಡಿ ಮಕ್ಕಳೇ ಆಗಿರುತ್ತಾರೆ,—"ಮನುಷ್ಯರು ತಾಯಿಯ ಮಕ್ಕಳೇ ಆಗಿದ್ದಾರೆ. ಎಲ್ಲ ಮನುಷ್ಯನಿಗೂ ಒಬ್ಬ ತಾಯಿ ಇದ್ದೇ ಇರುತ್ತಾಳೆ. ಪ್ರತಿಯೊಬ್ಬ ಮನುಷ್ಯನೂ ಯಾವುದೋ ಒಬ್ಬ ತಾಯಿಯ ಮಗನೇ ಆಗಿರಬೇಕು. ನೀನು, ವೃದ್ಧ ಚಕ್ರವರ್ತಿಯಾದ ನೀನು ಕೂಡ ಯಾವುದೋ ಒಬ್ಬ ತಾಯಿಯ ಹೊಟ್ಟೆಯಲ್ಲಿಯೇ ಹುಟ್ಟಿದ್ದೀಯೆ. ದೇವರ ಬಗ್ಗೆ ನಾಸ್ತಿಕನಾಗುವುದು ಸಾಧ್ಯ ; ಆದರೆ ತಾಯಿಯ ಬಗ್ಗೆ ಯಾವನೂ ನಾಸ್ತಿಕನಾಗಲಾರ, ಇದು ಶತಸ್ಸಿದ್ಧ !"

"ನಿಜವಾದ ಮಾತು, ತಾಯಿ !," ನಿರ್ಭೀತನಾದ ಕವಿ ಉದ್ಗರಿಸಿದ, "ನಿಜವಾದ ಮಾತು ! ಹೋರಿಗಳ ತಂಡವೇ ಇದ್ದರೂ ಅದರಿಂದ ಕರು ಹುಟ್ಟಲಾರದು. ಸೂರ್ಯನಿಲ್ಲದೆ ಹೂವುಗಳು ಅರಳಲಾರವು. ಒಲವಿಲ್ಲದೆ ನಲವು ಹುಟ್ಟಲಾರದು ; ಹೆಣ್ಣಿಲ್ಲದೆ ಒಲವಿಲ್ಲ. ಈ ಮಾತು ಶತಸತ್ಯ. ತಾಯಂದಿರಿಲ್ಲದೆ ಕವಿಗಳೂ ಹುಟ್ಟಲಾರರು, ಕಲಿಗಳೂ ಹುಟ್ಟಲಾರರು !"

ಮತ್ತೆ ಹೇಳಿದಳು ಆ ಹೆಂಗಸು :

"ನನ್ನ ಮಗುವನ್ನು ನನಗೆ ತಂದೊಪ್ಪಿಸು. ನಾನು ಅವನ ತಾಯಿ. ನಾನು ಆತ

ನನ್ನು ನನ್ನ ಪ್ರಾಣಕ್ಕಿಂತ ಹೆಚ್ಚಾಗಿ ಪ್ರೀತಿಸುತ್ತೇನೆ !"

ಮೋಸಸ್, ಮಹಮ್ಮದ್, ಕ್ರೂರ ಜನಗಳಿಂದ ಮರಣಕ್ಕೆ ತುತ್ತಾದರೂ ಮತ್ತೆ ಬದುಕಿ ಬರುವ ಏಸು ಮುಂತಾದ ಮಹಾ ಮಹಾ ದಾರ್ಶನಿಕರನ್ನು ಪಡೆದುಕೊಟ್ಟ ಹೆಣ್ಣಿಗೆ, ಜಗತ್ತಿನ ತಾಯಿಗೆ ಮಣಿದು ಪುನೀತರಾಗೋಣ !

ತನ್ನ ಸಾಟಿಯಿಲ್ಲದ ಶ್ರಮದಿಂದ ಬೇಸರಗೊಳ್ಳದೆ ಜಗತ್ತಿಗೆ ಅನವರತವೂ ಮಹಾತ್ಮರನ್ನು ತಂದುಕೊಡುತ್ತಿರುವ ತಾಯಂದಿರ ಅಡಿಗೆ ವಿನೀತಭಾವದಿಂದ ಶರಣಾಗಿ ನಮಿಸೋಣ ! ಅರಿಸ್ಟಾಟಲ್, ಫಿರ್ದೂಸಿ, ಜೇನಿನಂಥ ಪ್ರಿಯಚೇತನವನ್ನು ಪಡೆದ ಸಾದಿ, ವಂದ್ಯ ವಿಷಯಂಗಳ ರಸಿಕ ಕವಿ ಉಮರ್ ಖಯ್ಯಾಮ್, ಇಸ್‌ಕಂದರ್, ಅಂಧ ಕವಿ ಹೋಮರ್—ಇವರೆಲ್ಲರೂ ಆಕೆಯ ಮಕ್ಕಳು. ಎಲ್ಲರೂ ಆಕೆಯ ಹಾಲಿನಿಂದಲೇ ಪಾಲಿತರಾದವರು. ಅವರು ಇನ್ನೂ ಮೊಗ್ಗೆಯಾಗಿರುವಾಗ, ಆಕೆಯೇ ಅವರೊಬ್ಬೊಬ್ಬರನ್ನೂ ಕೈಹಿಡಿದು ನಡೆಸಿ ಈ ಜಗತ್ತಿಗೆ ತಂದುಬಿಟ್ಟಳು. ಜಗತ್ತಿನ ಎಲ್ಲ ಹೆಮ್ಮೆಗೂ ತವರಾದವಳು ಆಕೆ !

...ಆ ಭಯಂಕರ ಜನವಿಧ್ವಂಸಕ, ಕುಂಟ ತೈಮೂರ್ ಗಾಢವಾದ ಯೋಚನೆಯಲ್ಲಿ ಮುಳುಗಿ ಕೂತಿದ್ದ. ದೀರ್ಘ ನೀರವದ ಅನಂತರ ಆತ ತನ್ನ ಬಳಿಯಲ್ಲಿ ಕೂತಿದ್ದವರಿಗೆ ಹೇಳಿದ :

"ಪ್ರಿಯ ಸಭಾಸದರೆ! ನಾನು, ದೇವರ ಸೇವಕನಾದ ತೈಮೂರ್, ಇಂದು ಹೇಳಲೇಬೇಕಾಗಿರುವುದನ್ನು ಹೇಳಿಬಿಡುತ್ತೇನೆ!........ಹೀಗೆ ಅನೇಕ ವರ್ಷಗಳ ಕಾಲ ನಾನು ಬದುಕಿದ್ದೇನೆ. ನನ್ನ ಕಾಲಡಿಯಲ್ಲಿನ ನೆಲ ಇನ್ನಿಲ್ಲದ ನೋವಿನಿಂದ ನರಳಿ ಗೋಳಿಟ್ಟಿದೆ. ನನ್ನ ಪುತ್ರ ಜಿಹಾಂಗೀರನ ಸಾವಿನಿಂದ, ನನ್ನ ಹೃದಯಸೂರ್ಯನ ಸ್ಮರಣೆಗಾಗಿ ಮೃತ್ಯುವಿನ ಮೇಲೆ ಸೇಡು ತೀರಿಸಿಕೊಳ್ಳಲು, ಸುಮಾರು ಮೂವತ್ತು ವರ್ಷ ಕಾಲ ಈ ಭೂಮಿಯನ್ನು ನಾಶಗೊಳಿಸುತ್ತಾ ತಿರುಗಿದ್ದೇನೆ. ಅನೇಕ ಜನ, ರಾಜ್ಯಕ್ಕಾಗಿ ನಗರಳಿಗಾಗಿ ನನ್ನೆದುರು ಸೆಣಸಿ ನಿಂತು ಹೋರಾಡಿದ್ದಾರೆ. ಆದರೆ ಇಂದಿನವರೆಗೂ ನನ್ನ ದೃಷ್ಟಿಯಲ್ಲಿ ಮನುಷ್ಯನಿಗೆ ಬೆಲೆಯೇ ಇರಲಿಲ್ಲ. ಮನುಷ್ಯನೆಂದರೆ ಯಾರು, ಆತ ಏಕೆ ನನ್ನೆದುರು ಹೋರಾಡಲು ಸಿದ್ಧನಾಗುತ್ತಾನೆ ಎಂಬುದು ನನಗೆ ಅರ್ಥವಾಗಿಯೇ ಇರಲಿಲ್ಲ. ನಾನು, ತೈಮೂರ್, ಬೆಯಜಿದ್ ಸುಲ್ತಾನನನ್ನು ಸೋಲಿಸಿದಾಗ ಹೀಗೆ ಹೇಳಿದ್ದೆ : 'ಓ, ಬೆಯಜಿದ್ ! ದೇವರ ಮುಂದೆ ದೇಶ, ಮನುಷ್ಯ—ಇವಾವುವೂ ಎಣಿಕೆಗೆ ಬರಲಾರವು, ನೋಡು. ಆ ದೇವರು ದೇಶವನ್ನು ಮನುಷ್ಯರನ್ನು ನಮ್ಮಂಥವರ ಆಡಳಿತದಲ್ಲಿಡಲು ಸದಾ ಯತ್ನಿಸುತ್ತಿರುತ್ತಾನೆ. ನಿಜ, ನಮ್ಮಂಥವರ ಆಡಳಿತದಲ್ಲಿ ! —ನೀನೋ ಒಂದು ಕಣ್ಣಿನ ಕುರುಡ ; ನಾನೋ ಒಂದು ಕಾಲಿನ ಕುಂಟ !'.......ಭಾರದ ಹೊರೆಯಾದ ಸರಪಣಿಗಳಿಂದ ಬಿಗಿದುಕಟ್ಟಿ ಆತನನ್ನು ನನ್ನ ಹತ್ತಿರ ತಂದಾಗ, ಆ ದುರಾದೃಷ್ಟದ ಸುಲ್ತಾನನನ್ನು ನೋಡಿ ಹೀಗೆ ಹೇಳಿದ್ದೆ. ಆ ವೇಳೆಗೆ, ಜೀವನವೆನ್ನುವು

ದೊಂದು ವಿಫಲವೆಂದು ನನಗೆ ತೋರುತ್ತಿತ್ತು. ನಾನು ತಿಳಿದುಕೊಂಡಿದ್ದೆ, ಮನುಷ್ಯನ ಬಾಳು ಹಾಳಿನಲ್ಲಿ ಬೆಳೆದ ಹುಲ್ಲು ಎಂದು !

"ನಾನು ದೇವರ ಸೇವಕನಾದ ತೈಮೂರ್, ಇಂದು ಹೇಳಲೇಬೇಕಾಗಿರುವುದನ್ನು ಹೇಳಿಬಿಡುತ್ತೇನೆ ! ಈಗ ನನ್ನೆದುರಲ್ಲಿ ಹೆಣ್ಣೊಬ್ಬಳು—ಇಂತಹ ಅಸಂಖ್ಯಾತರಲ್ಲೊಬ್ಬಳು—ಕೂತಿದ್ದಾಳೆ. ನಾನು ಎಂದೆಂದೂ ಅರಿಯದ ಆತ್ಮದ ಭಾವನೆಗಳನ್ನು ಆಕೆ ಇಂದು ನನ್ನಲ್ಲಿ ಕೆರಳಿಸಿದ್ದಾಳೆ. ಆಕೆ ನನ್ನ ಸಂಗಡ ಸಮಾನಳ ಹಾಗೆ ಮಾತನಾಡುತ್ತಿದ್ದಾಳೆ. ಆಕೆ ಬೇಡುತ್ತಿಲ್ಲ. ಅಜ್ಞೆ ಮಾಡುತ್ತಿದ್ದಾಳೆ. ನಾನು ಈಗ ನೋಡುತ್ತಿದ್ದೇನೆ, ನನಗೆ ಈಗ ಅರ್ಥವಾಗುತ್ತಿದೆ—ಈ ಹೆಣ್ಣು ಹೇಗೆ ಇಷ್ಟು ಶಕ್ತಿಯುತಳಾಗಿರುವಳೆಂಬುದು. ಆಕೆ ಒಲವಿಗಾಗಿ ಹಂಬಲಿಸುತ್ತಿದ್ದಾಳೆ. ಪ್ರೇಮವೇ ಇದನ್ನು ಆಕೆಗೆ ಕಲಿಸಿಕೊಟ್ಟಿದೆ : ಆ ಮಗುವೇ ತನ್ನ ಬಾಳಿನ ಕಿಡಿಯೆಂದು, ಶತಶತಮಾನಗಳವರೆಗೂ ಆ ಕಿಡಿಯಿಂದಲೇ ಅನಂತವಾದ ಜ್ವಾಲೆ ಉರಿಯುತ್ತ ಸಾಗುವುದೆಂದು.......ಎಂಥೆಂಥ ಮಹಾ ದಾರ್ಶನಿಕರು ಕೂಡಾ ಮಕ್ಕಳಾಗಿರಲಿಲ್ಲವೆ ? ಎಂಥೆಂಥ ವೀರರು ಕೂಡ ಅಸಹಾಯಕ ಶಿಶುಗಳಾಗಿರಲಿಲ್ಲವೇ ?........ಓ, ಜಿಹಾಂಗೀರ್ ! ನನ್ನ ಕಣ್ಣಿನ ಬೆಳಕೆ. ಪ್ರಾಯಶಃ ನೀನು ಭೂಮಿಯನ್ನು ಜ್ವಲಂತವಾಗಿಸುವುದಕ್ಕೇ, ಜಗತ್ತಿನಲ್ಲಿ ಪ್ರೇಮವನ್ನು ಬಿತ್ತಿ ಬೆಳೆಸುವುದಕ್ಕೇ ನಿಯಮಿತನಾಗಿದ್ದೆ. ನಾನು, ನಿನ್ನ ತಂದೆ, ಅದನ್ನು ರಕ್ತದಿಂದ ತೋಯಿಸಿಬಿಟ್ಟಿದ್ದೇನೆ. ಈಗ ಅದು ಪುಷ್ಟವಾಗಿ ಬೆಳೆದಿದೆ !"

ಮತ್ತೊಮ್ಮೆ ಆ ಜಗದ್ದಂಡಕ ಮೌನದಲ್ಲಿ ಮುಳುಗಿದ. ಕೊನೆಯಲ್ಲಿ ಆತ ಮತ್ತೆ ಹೇಳಿದ :

"ನಾನು, ದೇವರ ಸೇವಕನಾದ ತೈಮೂರ್, ಇಂದು ಹೇಳಲೇಬೇಕಾಗಿರುವುದನ್ನು ಹೇಳಿಬಿಡುತ್ತೇನೆ ! ಈ ಕ್ಷಣವೇ ಮುನ್ನೂರು ರಾವುತರು ನನ್ನ ನಾಡಿನ ಮೂಲೆ ಮೂಲೆಗೂ ಹೋಗಿ ಹುಡುಕಿ ಈ ಹೆಂಗಸಿನ ಮಗುವನ್ನು ಕರೆತರತಕ್ಕದ್ದು. ಅಲ್ಲಿಯವರೆಗೂ ಈಕೆ ಇಲ್ಲಿಯೇ ಕಾಯುತ್ತ ಕೂತಿರುತ್ತಾಳೆ. ಆಕೆಯ ಸಂಗಡ ನಾನೂ ಕಾಯುತ್ತಿರುತ್ತೇನೆ. ಯಾವನು ಆ ಮಗುವನ್ನು ಮೊದಲು ಹುಡುಕಿ ತರುತ್ತಾನೋ ಅವನಿಗೆ ವಿಶೇಷವಾದ ಐಶ್ವರ್ಯವು ದೊರೆಯುವುದು. ಇದು ನನ್ನ, ತೈಮೂರನ ಕಟ್ಟಪ್ಪಣೆ ......ನನ್ನ ಮಾತು ನಿನಗೆ ಸರಿಯಾಗಿ ಕಂಡಿತೇ, ತಾಯಿ ?"

ಮುಖಕ್ಕೆ ಕವಿದಿದ್ದ ಕಪ್ಪು ಕೂದಲಿನ ರಾಶಿಯನ್ನು ಬೆನ್ನಿನತ್ತ ಸರಿಸಿ, ಮೃದುವಾಗಿ ನಕ್ಕು ಆಕೆ ಹೇಳಿದಳು :

"ಸರಿಯಾಗಿಯೇ ಮಾತಾಡಿದ್ದೀಯೆ, ದೊರೆ !"

ಭಯಂಕರನಾಗಿದ್ದ ಆ ವೃದ್ಧರಾಜ ಒಡನೆಯೇ ಎದ್ದು ಮೌನವಾಗಿ ಆಕೆಗೆ ನಮಿಸಿದ. ರಸಿಕ ಕವಿ ಕಿರ್ಮಾನಿ ಆನಂದದ ಉದ್ರೇಕದಿಂದ ಹಾಡತೊಡಗಿದ :

'ತಾರಾಕೋಟಿಯು ಅರಳುವ ಹೂವಿನ
ಹಾಡಿಗು ಹೆಚ್ಚಿನದು—ಉಂಟೇ, ಯಾವುದದು ?
ಎಲ್ಲರಿಗೂ ಗೊತ್ತು, ಅದು ಪ್ರೇಮದ್ದೇ ಹಾಡು.

ಮಾಗಿಯಲ್ಲಿ ನಡುನೇಸರು ಸವರುವ
ಬಿಸಿಲಿನ ಸುಖ ಮೀರಿ—ಹೆಚ್ಚಿನ ಸುಖವೆಲ್ಲಿ ?
ಒಲಿದವ ಹೇಳುವನು, ನಾ ಮುದ್ದಿಸುವವಳಲ್ಲಿ.

ನಟ್ಟಿರುಳಿನ ನೀಲಾಕಾಶದ ನಕ್ಷತ್ರಗಳೇ ಚಂದ
ಮಾಗಿಯಲ್ಲಿ ನಡುನೇಸರ ಬಿಸಿಲೋ ಸುಖದಾಲಿಂಗನ ಬಂಧ
ಆದರೆ ನನ್ನೊಲವಿನ ಕಣ್ಣುಗಳೋ ಹೂವಿಗಿಂತಲೂ ಸೊಂಪು
ಆಕೆಯ ಅಲೆ–ನಗು ಮಂದಹಾಸವೋ ಮಾಗಿಬಿಸಿಲಿಗೂ ಕೆಂಪು !

ಇದನೆಲ್ಲಾ ಮೀರುವ ಹಾಡೊಂದಿದೆ
ಹಾಡುವುದುಳಿದಿದೆ ಮುಂದೆ
ನೆಲ ನಿಂತಿದೆ ಅದರಿಂದ. ಸಿರಿ ಚೆಲ್ಲಿದೆ ಅದರಿಂದ ;

ಜಗದೆದೆಯನು, ಆ ಮಾಯದ ಎದೆಯನು
ಕೊಂಡಾಡುವ ಗಾನ
ಅದು ತಾಯಿಯ ಕುರಿತರಳುವ ತಾನ !'

●

●

ತೈಮೂರ್ ತನ್ನ ಕವಿಗೆ ಹೇಳಿದ :

"ಕಿರ್‌ಮಾನಿ ! ದೇವರು ತನ್ನ ತಿಳಿವನ್ನು ಹೊರಗೆ ಚೆಲ್ಲುವುದಕ್ಕೆ ನಿನ್ನ ತುಟಿಗಳನ್ನೇ ಆಯ್ದುಕೊಂಡಿದ್ದಾನೆ. ಎಂಥಚತುರ ಆತ !"

ಕುಡುಕ ಕವಿ ಕಿರ್ಮಾನಿ ಉತ್ತರಕೊಟ್ಟ :

"ದೊರೆ, ದೇವರೇ ಒಬ್ಬ ಮಹಾಕವಿ !"

ಕೂತಿದ್ದ ತಾಯಿ ಮೃದುವಾಗಿ ನಕ್ಕಳು ; ಅಲ್ಲಿ ನೆರೆದಿದ್ದ ರಾಜರುಗಳೆಲ್ಲ ನಕ್ಕರು ; ರಾಜಕುಮಾರರು ರಾಜಬಾಂಧವರು ನಗಲಾರಂಭಿಸಿದರು ; ಸೈನ್ಯಾಧಿಕಾರಿಗಳೂ ನಗತೊಡಗಿದರು. ಎಲ್ಲರೂ ಆಕೆಯ ಕಡೆ ನೋಡುತ್ತಿದ್ದರು. ಎಲ್ಲರೂ ಆ ಮಹಾ

ತಾಯಿಯ ಮಕ್ಕಳಾಗಿದ್ದರು!

........ಇವೆಲ್ಲವೂ ಸತ್ಯವಾದುವು; ಇಲ್ಲಿ ಹೇಳಿರುವುದೆಲ್ಲವೂ ಅಕ್ಷರಶಃ ಸತ್ಯವೆಂಬುದು ನಮ್ಮ ತಾಯಂದಿರಿಗೆ ಗೊತ್ತು. ಅವರನ್ನು ಕೇಳಿ, ಅವರು ಹೇಳುತ್ತಾರೆ:

"ನಿಜ, ಇದೆಲ್ಲವೂ ಸತ್ಯ. ಇದೇ ಅನಂತವಾದ ನಿತ್ಯಸತ್ಯ. ವಿಶ್ವದಲ್ಲಿ ನಮ್ಮ ಶಕ್ತಿಯನ್ನು ಮೀರಿಸಿದ ಶಕ್ತಿಯಿಲ್ಲ. ನಾವು ಮೃತ್ಯುವಿಗಿಂತಲೂ ಹೆಚ್ಚು ಶಕ್ತರಾಗಿದ್ದೇವೆ. ನಿಜ, ನಾವು! ಈ ಜಗತ್ತಿಗೆ ಅನವರತವಾಗಿ ಋಷಿಗಳನ್ನು, ಕವಿಗಳನ್ನು, ವೀರರನ್ನು ಪಡೆದು ಕೊಡುತ್ತಿರುವ ನಾವು; ಮನುಷ್ಯನನ್ನು ವೈಭವಶಾಲಿಯಾಗಿಸುವ ಸಮಸ್ತ ಶಕ್ತಿಗಳನ್ನೂ ಆತನಿಗೆ ಕೊಟ್ಟು ಪ್ರಚೋದಿಸುವ ನಾವು!"

## ೭ ತಾಯಿಯ ಒಲವು

ಕೆಲವು ವಾರಗಳಿಂದಲೂ ಶತ್ರುಪಡೆ ನಗರವನ್ನು ಉಕ್ಕಿನ ಕೋಟೆಯ ಹಾಗೆ ಬಳಸಿ ಕೂತಿತ್ತು. ಇರುಳು, ಪಾಳೆಯದೆದುರು ಉರಿಯುತ್ತಿದ್ದ ಹೊಡಚಲುಗಳ ಬೆಂಕಿನಾಲಗೆ ಮುಸಿಗಪ್ಪಿನ ಕಾವಳವನ್ನು ತೂರಿಬಂದು ಸಾವಿರ ಕೆಂಡಗಣ್ಣುಗಳಾಗಿ ಕೋಟೆಯ ಗೋಡೆ ಯನ್ನು ತಾಗುತ್ತಿತ್ತು. ಮತ್ಸರದಿಂದೆಂಬಂತೆ ಉರಿದು ಜಾಗೃತಗೊಳಿಸುವ ಆ ಬೆಂಕಿ ನಗರದಲ್ಲೆಲ್ಲ ಭಯಾನಕವಾದ ಕಾಳ ಯೋಚನೆಗಳನ್ನು ಹೊಡೆದೆಬ್ಬಿಸುತ್ತಿತ್ತು.

ಕೋಟೆಯ ಬುಡದಲ್ಲಿ ನಿಂತು ನೋಡಿದಾಗ—ಶತ್ರುಗಳು ಉರುಲಿಕ್ಕಿದಂತೆ ನಗರ ವನ್ನು ಸುತ್ತಿ ಬಿಗಿಯುತ್ತ ಬರುತ್ತಿರುವುದು ಕಾಣಿಸುತ್ತಿತ್ತು; ದೂರದಲ್ಲಿ ಬೆಂಕಿಯ ಸುತ್ತಲೂ ಕಪ್ಪು ನೆರಳುಗಳು ಮುತ್ತಿ ಕುಳಿತಿರುವುದು ತೋರುತ್ತಿದ್ದಿತು. ಕೊಬ್ಬಿದ ಕುದುರೆಗಳ ಕೆನೆತ, ಯುದ್ಧದಲ್ಲಿ ಜಯ ಸಿದ್ಧವೆಂದು ಭರವಸೆ ಪಡೆದ ಶತ್ರುಪಡೆಯವರ ಹಾಡು ನಗು ಅಟ್ಟಹಾಸಗಳು ಅಲ್ಲಿಗೂ ಕೇಳಿಬರುತ್ತಿದ್ದವು. ಶತ್ರುಜನರ ಅಟ್ಟಹಾಸದ ಧ್ವನಿಗಿಂತ ಕರ್ಕಶವಾದ ಶಬ್ದ ಕಿವಿಗೆ ಇನ್ನಾವುದಿದ್ದೀತು ?

ನಗರಕ್ಕೆ ನೀರು ಒದಗಿಸುತ್ತಿದ್ದ ಹೊಳೆಗಳೆಲ್ಲವನೂ ಶತ್ರುಗಳು ಹೆಣಗಳಿಂದ ತುಂಬಿಸಿಬಿಟ್ಟಿದ್ದರು. ನಗರದ ಗೋಡೆಗಳಿಗೆ ಹಬ್ಬಿ ಕಂಗೊಳಿಸುತ್ತಿದ್ದ ದ್ರಾಕ್ಷೆಯ ಬಳ್ಳಿ ಗಳನ್ನು ಭಸ್ಮಗೊಳಿಸಿದರು. ಹೊಲಗಳನ್ನು ತುಳಿದು ಪಯಿರನ್ನು ನೆಲಸಮ ಮಾಡಿದರು. ಹಣ್ಣಿನ ತೋಟಗಳನ್ನು ಕಡಿದು ಧ್ವಂಸ ಮಾಡಿದರು. ಇಂತಹದು ಒಂದೇ ಎರಡೇ— ಒಟ್ಟಿನಲ್ಲಿ ನಗರವನ್ನು ಬತ್ತಲೆಗೊಳಿಸಿ ಬಿಟ್ಟಿದ್ದರು, ಆ ವೈರಿಗಳು. ದಿನ ಬೆಳಗಾದರೆ ತುಬಾಕಿಗಳು ನಗರದ ಮೇಲೆ ಮದ್ದುಗುಂಡುಗಳ ಮಳೆಗರೆಯುತ್ತಿದ್ದವು.

ನಗರದ ಓಣಿಓಣಿಗಳಲ್ಲಿ, ಯುದ್ಧದಿಂದ ಶೋಷಿತರಾಗಿ ಹಸಿವಿನಿಂದ ಬಳಲಿ ಮುಕಾದ ಸೈನಿಕರ ತುಣುಕು ಪಡೆಗಳು ಗಸ್ತುಹಾಕತೊಡಗಿದ್ದವು. ಮನೆಮನೆಯ ಕಿಟಕಿ ಗಳಿಂದ ಗಾಯಗೊಂಡವರ ನರಳಿಕೆ, ಸ್ಮರಣೆಯಿಲ್ಲದವರ ಹುಚ್ಚು ಮಾತು, ಹೆಂಗಸರ

ಮೊರೆಯಿಡುವ ಪ್ರಾರ್ಥನೆ, ಮಕ್ಕಳ ಪ್ರಲಾಪ—ಎಲ್ಲವೂ ಬೆರೆತು ಹೊರಬರುತ್ತಿತ್ತು. ಜನಗಳು ಪಿಸುಮಾತಿನಲ್ಲಿ ಗುಸುಗುಟ್ಟುತ್ತಿದ್ದರು, ಹೇಳುತ್ತಿದ್ದಂತೆ ಅರ್ಧದಲ್ಲೆ ನಿಲ್ಲಿಸಿ ಬಿಡುತ್ತಿದ್ದರು. ವಾತಾವರಣದ ಬಿಗಿಯಲ್ಲಿ ಸಿಕ್ಕ ಆ ನಗರದ ಜನ ಭಯಜಾಗೃತರಾಗಿದ್ದರು.......ದಿನದಿನಕ್ಕೂ ಶತ್ರುಗಳು ಸುತ್ತಿಮುತ್ತಿ ಮುಂದುವರಿಯುತ್ತಿದ್ದರು.

ಎಲ್ಲಕ್ಕಿಂತ ಅಸಹ್ಯವೆಂದರೆ ಆ ರಾತ್ರಿಗಳು. ರಾತ್ರಿಯ ಗಂಭೀರ ನೀರವದಲ್ಲಿ ಅಳುನರಳಿಕೆಗಳು ಸ್ಪಷ್ಟವಾಗಿ ಕೇಳಿಸುತ್ತಿದ್ದವು. ಶತ್ರು ಶಿಬಿರದಿಂದ ಕಣ್ಣು ತಪ್ಪಿಸಿಕೊಂಡು ಬೆಟ್ಟದ ಕಣಿವೆಯ ಬಂಡದಿಂದ ಕಪ್ಪು ಛಾಯೆಗಳು ನಗರದ ಗೋಡೆಯ ದಿಕ್ಕಿಗೆ ಕದ್ದು ನುಸುಳಿ ಬರುತ್ತಿರುವುದು ಕಾಣಿಸುತ್ತಿತ್ತು........ಬೆಟ್ಟದ ಕರಿಯಂಚಿನಿಂದ ಚಂದ್ರ ಹುಟ್ಟಿಬರುತ್ತಿದ್ದ, ಕತ್ತಿಯ ಪೆಟ್ಟಿನಿಂದ ನುಗ್ಗುನುಗ್ಗಾದ ರಕ್ತಸಿಕ್ತವಾದ ಗುರಾಣಿಯ ಹಾಗೆ !

ನಗರದ ಜನರೆಲ್ಲ ಅಸಹಾಯಕತೆಯಿಂದ ಎದೆಯೊಡೆದು ಕೂತುಬಿಟ್ಟಿದ್ದರು. ಕಾಳಗದ ನೋವಿನಲ್ಲಿ ಹಸಿವಿನ ಸಂಕಟದಲ್ಲಿ ದಿನದಿನಕ್ಕೂ ಅವರ ಗೆಲುವಿನ ಹಂಬಲ ಕ್ಷಯಿಸುತ್ತಿತ್ತು. ಭಯದಿಂದ ಅವರು ಮೂಡಿ ಬರುವ ಚಂದ್ರನ ಕಡೆ ದುರುಗುಟ್ಟಿಕೊಂಡು ನೋಡುತ್ತಿದ್ದರು. ಬೆಟ್ಟದ ಮೇಲಿನ ಶತ್ರುಶಿಬಿರಗಳ ಛಾಯೆ ವಕ್ರವಾದ ಕೋರೆ ದಾಡೆಗಳ ಹಾಗೆ ತೋರುತ್ತಿದ್ದವು—ಎಲ್ಲವೂ ಅವರಿಗೆ ಮತ್ತೆ ಮತ್ತೆ ಸಾವಿನ ನೆನಪನ್ನೇ ತಂದೊಡ್ಡುತ್ತಿದ್ದವು. ಅವರ ಭೀತ ಚೇತನಗಳಿಗೆ ಸಾಂತ್ವನ ಕೊಡಲು ಆಕಾಶದಲ್ಲಿ ಒಂದು ನಕ್ಷತ್ರ ಕೂಡ ಮಿನುಗುತ್ತಿರಲಿಲ್ಲ.

ಮನೆಯಲ್ಲಿ ದೀಪವನ್ನು ಹಚ್ಚಲು ಸಹ ಜನ ಹೆದರುತ್ತಿದ್ದರು. ಭಾರವಾದ ಕತ್ತಲೆ ನಗರವನ್ನು ನುಂಗಿ ಕೂತಿತ್ತು. ಆ ಕಾಳಗತ್ತಲೆಯಲ್ಲಿ, ಒಬ್ಬ ಹೆಣ್ಣು, ತಲೆಯಿಂದ ಕಾಲಿನವರೆಗೆ ಕಪ್ಪು ಬಟ್ಟೆ ಧರಿಸಿ ರಸ್ತೆಯಲ್ಲಿ ಮುಗ್ಗರಿಸುತ್ತ ಮೌನವಾಗಿ ನಡೆದಿದ್ದಳು, ನೀರಿನ ಆಳದಲ್ಲಿ ತಡಕುತ್ತ ತೇಲುವ ಮೀನಿನ ಹಾಗೆ !

ಆಕೆಯನ್ನು ಕಂಡಾಗ ಅಲ್ಲಿದ್ದ ಜನ ಒಬ್ಬರಿಗೊಬ್ಬರು ಗುಸುಗುಡತೊಡಗಿದರು.

"ಯಾರು, ಅವಳೆ ?"

"ಹೌದು, ಅವಳೆ !"

ಕೆಲವರು ಹಿಂದೆ ಸರಿದು ಮನೆಯೊಳಕ್ಕೆ, ರಸ್ತೆಯ ಕಮಾನಿನ ಹಿಂಬದಿಗೆ ನುಸುಳಿಕೊಂಡರು ; ಕೆಲವರು ಅವಳಿಗಿಂತ ಮುಂದಾಗಿ ಬೇಗ ಬೇಗ ತಲೆ ತಗ್ಗಿಸಿ ಓಡತೊಡಗಿದರು. ರಸ್ತೆಯ ಕಾವಲುಗಾರನೊಬ್ಬ ಕಠಿನಸ್ವರದಲ್ಲಿ ಕೂಗಿ ಹೇಳಿದ :

"ಮತ್ತೆ ಹೊರಟುಬಿಟ್ಟೆಯಾ ? ಎಚ್ಚರಿಕೆ. ಹೀಗೇ ಹೊರಟರೆ ಯಾರಾದರೂ ನಿನ್ನನ್ನು ಕೊಂದುಬಿಡುತ್ತಾರೆ ; ಬಿಡಿಸಲು ಕೂಡ ಒಬ್ಬನು ಬರುವುದಿಲ್ಲ......."

ಆಕೆ ಕೊಂಚ ಹಿಂದೆ ಸರಿದು ಅಲ್ಲಿಯೇ ನಿಂತಳು. ರಕ್ಷಕ ದಳದವರು ಮುಂದೆ ಸಾಗುತ್ತಿದ್ದರು. ಆಯುಧಧಾರಿಗಳಾಗಿದ್ದ ಆ ಸಿಪಾಯಿಗಳು—ಅಸಹ್ಯವಾಗಿಯೋ

ಅಸಾಧ್ಯವಾಗಿಯೋ—ಆಕೆಯ ಮೇಲೆ ಕೈಯೆತ್ತಲಿಲ್ಲ ; ಮತ್ತೆ ಈಕೆ ಏಕಾಕಿಯಾಗಿ ಕತ್ತಲೆಯಲ್ಲಿ ಸದ್ದಿಲ್ಲದೆ ಸಾಗುತ್ತಿದ್ದಳು, ರಸ್ತೆಯಿಂದ ರಸ್ತೆಗೆ, ನಗರದ ದುರಾದೃಷ್ಟವೇ ಮೂರ್ತೀಭವಿಸಿ ನಡೆದ ಹಾಗೆ. ಸುತ್ತಲಿನ ಕಾಳಗಪ್ಪಿನಿಂದ ಅಲೆಅಲೆಯಾಗಿ ನೋವಿನ ಕೂಗುಗಳು, ಹೊರಟಿದ್ದವು. ನರಳುವ ಧ್ವನಿ, ಅಳು, ಮೊರೆ, ಗೆಲುವಿನ ಆಸೆಯನ್ನು ತೊರೆದ ಸಿಪಾಯಿಗಳು ಗೊಣಗುತ್ತಿದ್ದುದು—ಎಲ್ಲವೂ ಆಕೆಯನ್ನು ಬೆನ್ನಟ್ಟಿ ಹಿಂಬಾಲಿಸುತ್ತಿದ್ದವು........

ಆ ನಗರದ ಪ್ರಜೆಯಾಗಿ, ತಾಯಿಯಾಗಿ ಆಕೆ ತನ್ನ ಮಗನ ಬಗ್ಗೆ ಯೋಚಿಸತೊಡಗಿದ್ದಳು. ನಗರವನ್ನು ನಾಶಮಾಡಲು ಬಂದ ವೈರಿಪಡೆಯ ನಾಯಕ ತನ್ನ ಮಗ—ಚೆಲುವ, ಉಲ್ಲಸಿ ಆದರೆ ನಿಷ್ಕರುಣಿ. ಕೆಲವೇ ದಿನಗಳ ಹಿಂದೆ ಆಕೆ ತನ್ನ ಮಗನನ್ನು ಹೆಮ್ಮೆಯಿಂದ ನೋಡಿದ್ದಳು. ದೇಶದ ಜನಗಳಿಗೆ ಉಪಕಾರಿಯಾಗಿ, ಅಪರ ಒಲವಿನ ನಾಯಕನಾಗಿ, ಅಗ್ರಗಾಮಿ ಶಕ್ತಿಯಾಗಿ ಬಾಳುವ ಪುತ್ರನೊಬ್ಬನನ್ನು ತನ್ನ ನಾಡಿಗೆ—ತಾನು ಹುಟ್ಟಿ ಬೆಳೆದ, ತನ್ನ ಮಗನೂ ಹುಟ್ಟಿ ಪಾಲಿತನಾದ ಆ ಮಮತೆಯ ಗೂಡಿಗೆ—ಅಮೂಲ್ಯ ಕಾಣಿಕೆಯಾಗಿ ಒಪ್ಪಿಸಿದ್ದೇನೆಂದು ಗರ್ವಪಟ್ಟಿದ್ದಳು. ಪ್ರೇಮ ಸುತ್ತಿದ ನೂರಾರು ಅದೃಶ್ಯ ಬಂಧನಗಳಿಂದ ಆಕೆಯ ಹೃದಯ ಬಿಗಿದಿದ್ದಿತು—ತನ್ನ ಪೂರ್ವಿಕರು ಯಾವ ಕಲ್ಲುಗಳಿಂದ ಮನೆಗಳನ್ನು, ನಗರವನ್ನು, ಕೋಟೆಯನ್ನು ಕಟ್ಟಿ ನಿಲ್ಲಿಸಿದ್ದರೋ ಆ ಪುರಾತನ ಶಿಲೆಗಳಿಗೆ ; ತನ್ನ ಬಂಧುವರ್ಗದ ಮೂಳೆ ಮೂಳೆಯೂ ಮಣ್ಣಾಗಿ ಅರಳಿದ್ದ ತಾಯಿ ಭೂಮಿಗೆ ; ಅಲ್ಲಿ ಹುಟ್ಟಿ ಹಾರಾಡುತ್ತಿದ್ದ ಬಗೆಬಗೆಯ ಕಟ್ಟುಕತೆಗಳಿಗೆ, ಹಾಡುಗಳಿಗೆ, ಜನಗಳ ಆಸೆ ಹಂಬಲಗಳಿಗೆ. ಆ ಹೆಣ್ಣಿನ ಹೃದಯ ತನ್ನ ಒಲವಿನ ವಸ್ತುವನ್ನು ಕಳೆದುಕೊಂಡು ಒಳಗೊಳಗೇ ಅಳುತ್ತಿತ್ತು, ಗೋಳಿಡುತ್ತಿತ್ತು. ತನ್ನಲ್ಲಿ ಉರಿಯತೊಡಗಿದ್ದ ಪುತ್ರಪ್ರೇಮ ಹಾಗೂ ದೇಶಪ್ರೇಮ—ಇವುಗಳಲ್ಲಿ ಯಾವುದು ಹೆಚ್ಚೆಂದು ನಿರ್ಧರಿಸಲು ಆಕೆ ಮತ್ತೆ ಮತ್ತೆ ತೂಗಿ ನೋಡುತ್ತಿದ್ದಳು, ತನ್ನ ಹೃದಯದ ತಕ್ಕಡಿಯಲ್ಲಿ. ಆದರೆ ಆಕೆಯ ಶ್ರಮ ನಿರರ್ಥಕವಾಯಿತು, ಚಿತ್ತ ನಿರ್ಧಾರಶೂನ್ಯವಾಯಿತು.

ಹೀಗೆಯೇ ಆಕೆ ರಾತ್ರಿಯೆಲ್ಲ ಅಲೆಯುತ್ತಿದ್ದಳು, ರಸ್ತೆ ರಸ್ತೆಗಳಲ್ಲಿ. ರಸ್ತೆಗಳಲ್ಲಿ ಜನ ತಿರುಗುವುದೇ ಅಪರೂಪವಾಗಿತ್ತು. ಅವರಲ್ಲಿ ಕೂಡ ಅನೇಕರು ಆಕೆಯನ್ನು ಗುರುತಿಸಲಾಗದೆ, ಆ ಕಾಳಮೂರ್ತಿ, ತಮಗೆ ತೀರ ಸಮೀಪವಾಗುತ್ತಿದ್ದ ಮೃತ್ಯುವಿನ ಪ್ರತಿಮೆಯೆಂದೇ ಭಾವಿಸಿದರು. ಆಕೆಯನ್ನು ಗುರುತಿಸಿದ ಕೆಲವರು ಮೌನವಾಗಿ ಹಿಂತಿರುಗಿ ನಡೆದರು, ಆ ಕೊಲೆಗಡುಕನ ತಾಯಿಯಿಂದ ದೂರವಾಗಿ.

........ಒಂದು ದಿನ. ಆಕೆ ಹೀಗೆಯೇ ನಗರದ ರಸ್ತೆರಸ್ತೆಗಳಲ್ಲಿ ಅಲೆಯುತ್ತಿದ್ದಾಗ, ಅಲ್ಲಿನ ಜನರಹಿತವಾದ ಒಂದು ಮೂಲೆಯಲ್ಲಿ, ಕೋಟೆಯ ಬದಿಗೆ ಗೋಳಿಡುತ್ತಿದ್ದ ಹೆಣ್ಣೊಬ್ಬಳನ್ನು ಕಂಡಳು. ಅವಳ ಎದುರಲ್ಲಿ ಒಂದು ಶವ ಕಟ್ಟಿಗೆಯ ತುಂಡಿನ ಹಾಗೆ

ಬಿದ್ದಿತ್ತು. ಮಣ್ಣಿನ ಬೊಂಬೆಯಂತೆ ಅಲುಗವೆ ಕುಳಿತಿದ್ದ ಆ ಹೆಣ್ಣು, ತನ್ನ ನೋವು ಕೊರೆದ ಮುಖವನ್ನು ಆಕಾಶಕ್ಕೆ ತಿರುಗಿಸಿ ನಕ್ಷತ್ರಗಳಿಗೆ ಮೊರೆಯಿಡುವಂತೆ ಹಂಬಲಿಸುತ್ತಿದ್ದಳು. ಕೋಟೆಯ ಮೇಲುಭಾಗದಲ್ಲಿ ಪ್ರಹರಿಗಳು ಆಯುಧವನ್ನು ಕಲ್ಲಿಗೊರಗಿಸಿ ಮೆಲುದನಿಯಲ್ಲಿ ಮಾತನಾಡತೊಡಗಿದರು.

ಕೊಲೆಗಡುಕನ ತಾಯಿ ಆ ಹೆಣ್ಣಿನ ಬಳಿಗೆ ಬಂದು ಕೇಳಿದಳು :

"ನಿನ್ನ ಗಂಡನೇನು ?"—ಆ ಶವವನ್ನು ಸೂಚಿಸಿ.

"ಅಲ್ಲ."

"ನಿನ್ನ ತಮ್ಮ ?"

"ನನ್ನ ಮಗ, ನನ್ನ ಗಂಡನನ್ನು ಹದಿಮೂರು ದಿನಗಳ ಹಿಂದೆಯೇ ಕೊಂದು ತೀರಿಸಿದರು ; ಈ ದಿನ ನನ್ನ ಮಗನ ಸರದಿ ಬಂತು."

ತನ್ನ ಮೊಣಕಾಲಿನ ಮೇಲೆ ಎದ್ದು, ಆ ಹತನಾದವನ ತಾಯಿ ದೈನ್ಯದಿಂದ ಹೇಳಿದಳು :

"ದೇವಮಾತೆಗೆ ಎಲ್ಲವೂ ತಿಳಿದಿರುತ್ತದೆ. ಆಕೆ ಎಲ್ಲವನ್ನೂ ಕಣ್ಣಾರೆ ಕಾಣುತ್ತಾಳೆ. ಆಕೆಗೆ ನಾನು ಕೃತಜ್ಞಳಾಗಿದ್ದೇನೆ !"

"ಕೃತಜ್ಞಳಾಗಿದ್ದೀಯೆ !—ಏಕೆ ?"—ಈಕೆ ಕೇಳಿದಳು.

"ಈಗ, ನನ್ನ ಮಗ ತನ್ನ ದೇಶಕ್ಕಾಗಿ ಹೋರಾಡಿ ಗೌರವದಿಂದ ಪ್ರಾಣವನ್ನು ಅರ್ಪಿಸಿದ್ದಾನೆ.........ಆತ ವೈಭವಪ್ರಿಯ, ತುಂಬ ಹಗುರ ಹೃದಯದವ—ಅದಕ್ಕಾಗಿಯೇ ನಾನು ಹೆದರಿಕೊಂಡಿದ್ದೆ, ಆತ ಸ್ವಾರ್ಥದಿಂದ ತನ್ನ ನಾಡನ್ನು ಕಡೆಗಣಿಸಿ ಬಿಡುತ್ತಾನೋ ಎಂದು. ಸದ್ಯ ಹಾಗೆ ಮಾಡಲಿಲ್ಲ—ಈಗ ಶತ್ರುಪಡೆಯ ನಾಯಕನಾಗಿ ನಮ್ಮ ನಗರವನ್ನು ನಾಶಮಾಡಲು ಬಂದಿದ್ದಾನಲ್ಲ, ಆ ದೇವಮಾನವರ ವೈರಿಯ ಹಾಗೆ. ಯಾವ ಹಾಳು ಹೆಣ್ಣು ಹಡೆದಳೋ ಆತನನ್ನು. ಆ ತಾಯಿ ಮಕ್ಕಳಿಬ್ಬರೂ ನಾಶವಾಗಿ ಹೋಗಲಿ !"

ಕೊಲೆಗಡುಕನ ತಾಯಿ, ತನ್ನ ಕಪ್ಪು ಬಟ್ಟೆಯಲ್ಲಿ ಮುಖಮುರೆಸಿಕೊಂಡು ಮುಂದೆ ನಡೆದಳು. ಮರುದಿನ ಆಕೆ ನಗರದ ಅಧಿಕಾರಿಗಳ ಎದುರಲ್ಲಿ ಹೋಗಿ ಬೇಡಿಕೊಂಡಳು :

"ನನ್ನ ಮಗ ಇಂದು ನಿಮ್ಮ ಶತ್ರುವಾಗಿ ಬಂದಿದ್ದಾನೆ. ನೀವು ನನ್ನನ್ನು ನನ್ನ ಮಗನ ಬಳಿಗೆ ಹೋಗುವುದಕ್ಕೆ ಅಪ್ಪಣೆ ಕೊಡಿ........."

ಅವರು ಹೇಳಿದರು :

"ನೀನೂ ಮನುಷ್ಯಳು. ನಿನ್ನ ದೇಶವೆಂಬುದು ನಿನಗೆ ಪವಿತ್ರವಾಗಿರಲೇಬೇಕು. ನಮಗೆ ಒಬ್ಬೊಬ್ಬರಿಗೂ ಹೇಗೋ ಹಾಗೇ ನಿನಗೂ ನಿನ್ನ ಮಗ ಶತ್ರುವಾಗಿದ್ದಾನೆ."

"ನಾನು ಅವನ ತಾಯಿ. ನಾನು ಆತನನ್ನ ಪ್ರೇಮಿಸುತ್ತೇನೆ. ಆತ ಹೀಗಾದುದಕ್ಕೆ ನೀವು ಆತನನ್ನು ನಿಂದಿಸಬಾರದು, ನನ್ನನ್ನು ನಿಂದಿಸಿ !"

ಅವರೆಲ್ಲರೂ ಕೂಡಿ ವಿಚಾರಮಾಡಿ ತಮ್ಮಲ್ಲಿ ನಿರ್ಧರಿಸಿಕೊಂಡು ಆಕೆಗೆ ಹೇಳಿದರು :

"ನಿನ್ನ ಮಗ ಮಾಡಿದ ದ್ರೋಹಕ್ಕೆ ನಿನ್ನನ್ನು ಕೊಲ್ಲುವುದು ಗೌರವದ ಕಾರ್ಯವಲ್ಲ. ನಿನ್ನ ಮಗ ಇಂಥ ಕ್ರೂರ ಕೊಲೆಪಾತಕಿಯಾಗದಂತೆ ನೀನು ಮಾಡಬಹುದಿತ್ತು, ನಿಜ. ಆದರೆ ನಾವು ನಿನ್ನ ಕಷ್ಟವನ್ನೂ ಬಲ್ಲೆವು. ನಿನ್ನ ಮಗನ ದೋಷಕ್ಕಾಗಿ ನಾವು ನಿನ್ನನ್ನು ನಗರದಲ್ಲಿ ಒತ್ತೆ ಇಟ್ಟುಕೊಳ್ಳುವ ಕಾರಣವೂ ಇಲ್ಲ. ಆದರೆ ನಿನ್ನ ಮಗ ನಿನಗಾಗಿ ಎಳ್ಳಷ್ಟೂ ಹಂಬಲಿಸುವನೆಂದು ಭ್ರಾಂತಿ ಬೇಡ. ನಮಗೆ ಗೊತ್ತು, ಆ ರಾಕ್ಷಸ ನಿನ್ನನ್ನು ಮರೆತೇಬಿಟ್ಟಿದ್ದಾನೆ. ನೀನು ಇಚ್ಛೆ ಇದ್ದರೆ ಅಲ್ಲಿಗೆ ಹೋಗು. ನೀನು ಹಾಗೆ ಬಯಸುವುದಾದರೆ ಅದೇ ಒಂದು ಶಿಕ್ಷೆ ! ಮರಣಕ್ಕಿಂತಲೂ ಅದೇ ನಿನಗೆ ಕಠೋರವಾದ ಶಿಕ್ಷೆಯೆಂದು ನಾವು ನಂಬಿದ್ದೇವೆ !"

"ನಿಜ", ಆಕೆ ಹೇಳಿದಳು, "ಅದೇ ಮರಣಕ್ಕಿಂತಲೂ ಕ್ರೂರವಾದ, ಉಗ್ರವಾದ ಶಿಕ್ಷೆ".

..............ಅಂತೆಯೇ ಅವರು ಕೋಟೆಯ ಬಾಗಿಲನ್ನು ತೆರೆಸಿ ಆಕೆಯನ್ನು ಹೊರಗೆ ಬಿಟ್ಟರು. ಕೋಟೆಯ ಬತೇರಿಯ ಮೇಲೆ ನಿಂತು, ಬಹು ಹೊತ್ತು, ಆಕೆ ತನ್ನ ತವರು ನೆಲದಿಂದ—ಈಗ ತನ್ನ ಮಗ ಧಾರಾಕಾರವಾಗಿ ರಕ್ತವನ್ನು ಸುರಿಸಿ ತೋಯಿಸಿದ ಆ ನೆಲದಿಂದ—ದೂರವಾಗಿ ಹೋಗುತ್ತಿರುವುದನ್ನು ನೋಡಿದರು. ಆಕೆ ನಿಧಾನವಾಗಿ ಹೋಗುತ್ತಿದ್ದಳು. ಆಕೆಯ ಕಾಲುಗಳು ಈ ನೆಲದಿಂದ ಕಿತ್ತು ನಡೆಯಲು ಒಲ್ಲೆವೆನ್ನುತ್ತಿದ್ದವು. ನಗರ ರಕ್ಷಣೆಗಾಗಿ ಹೋರಾಡಿ ಮಡಿದ ವೀರರುಗಳ ಶವಗಳಿಗೆ ತಲೆಬಾಗಿ ನಮಸ್ಕರಿಸಿದಳು, ಮುರಿದ ಆಯುಧವೊಂದನ್ನು ಜುಗುಪ್ಸೆಯಿಂದ ಒದೆದು ಮುಂದೆ ನಡೆದಳು. ನೆತ್ತರನ್ನು ಹೀರುವ ಆಯುಧಗಳೆಲ್ಲವೂ ತಾಯಂದಿರಿಗೆ ಶತ್ರುಗಳಿದ್ದಂತೆ, ಜೀವರಕ್ಷಣೆಗಾಗಿ ಬರುವ ಆಯುಧಗಳನ್ನು ಮಾತ್ರ ಪರಿಗಣಿಸಬಲ್ಲರು ಅವರು.

ತನ್ನ ವಸ್ತ್ರದಲ್ಲಿ ಅಮೂಲ್ಯವಾದ ಅಮೃತಕುಂಭವೊಂದನ್ನು ಬಚ್ಚಿಟ್ಟುಕೊಂಡ ಹಾಗೆ, ಅದರ ಹನಿಯೂ ತುಳುಕಬಾರದೆಂದು ಅತಿ ಜಾಗ್ರತಳಾಗಿ ನಡೆಯುತ್ತಿರುವಳೋ ಎನ್ನುವ ಹಾಗೆ ಆಕೆ ನಿಧಾನವಾಗಿ ನಡೆಯುತ್ತಿದ್ದಳು. ಕೋಟೆಯ ಮೇಲುಭಾಗದಲ್ಲಿ ನಿಂತು ನೋಡುತ್ತಿರುವವರಿಗೆ ಆಕೆ ದೂರ ದೂರ ಸಣ್ಣದಾಗುತ್ತ ನಡೆದಂತೆ, ಆಕೆಯ ಕೂಡ ತಮ್ಮ ಜುಗುಪ್ಸೆ ನಿರಾಶೆಗಳೂ ಸಾಗಿಹೋಗುತ್ತಿವೆಯೋ ಎಂದು ಕಾಣುತ್ತಿತ್ತು.

ಬಹಳ ದೂರ ಹೋದಮೇಲೆ ಆಕೆ ನಿಂತು, ತನ್ನ ಅವಕುಂಠನವನ್ನು ತೆಗೆದೊಗೆದು ನಗರದ ಕಡೆ ನಿಡುನೋಟ ಬೀರುತ್ತಿದ್ದುದು ಕಾಣಿಸಿತು, ಕೋಟೆಯ ಮೇಲೆ ನಿಂತು ನೋಡುತ್ತಿದ್ದವರಿಗೆ. ಮತ್ತೆ ಸ್ವಲ್ಪ ಹೊತ್ತಿನಲ್ಲಿ, ಬಹು ದೂರದ ಶತ್ರು ಪಾಳೆಯದ ಬಯಲಲ್ಲಿ ಆಕೆ ಏಕಾಕಿಯಾಗಿ ಹೋಗುತ್ತಿದ್ದುದು, ಅನಂತರ, ಆಕೆಯಂತೆಯೇ ಕಪ್ಪಾದ ಹಲವು ನೆರಳುಗಳು ಆಕೆಯ ಹತ್ತಿರಕ್ಕೆ ಬರುತ್ತಿದ್ದುದು ಅವರಿಗೆ ಕಾಣಿಸಿತು.

ಶತ್ರುಪಾಳೆಯದಿಂದ ಬಂದವರು ಆಕೆಯನ್ನು ಪ್ರಶ್ನಿಸಿದರು—ಯಾರು, ಎಲ್ಲಿಗೆ ಹೋಗುತ್ತಿದ್ದಾಳೆ—ಮುಂತಾಗಿ.

"ನಿಮ್ಮ ನಾಯಕನಾದ ದೊರೆ ನನ್ನ ಮಗ," ಆಕೆ ಹೇಳಿದಳು. ಆ ಸಿಪಾಯಿಗಳೊಬ್ಬರೂ ಆಕೆಯ ಮಾತನ್ನೂ ಸಂಶಯಿಸಲಿಲ್ಲ. ಅವರೆಲ್ಲ ಆಕೆಯನ್ನು ಸುತ್ತುವರಿದು ತಮ್ಮ ನಾಯಕನನ್ನು ಹೊಗಳಿ ಹಾಡಿದರು. ಆತ ಎಷ್ಟು ಪರಾಕ್ರಮಶಾಲಿಯೆಂದು ಕುಶಲಿಯೆಂದು ಹೇಳುತ್ತ, ಆತನ ಗುಣಗಾನ ಮಾಡಿದರು. ಆಕೆ ಎಲ್ಲವನ್ನೂ ಕೇಳಿದಳು, ಹೆಮ್ಮೆಯಿಂದ ತಲೆಯನ್ನು ಮೇಲೆತ್ತಿ, ತುಸುವೂ ಬೆರಗಿಲ್ಲದೆ. ಕಾರಣ, ಆಕೆಗೆ ಗೊತ್ತು, ಆತ ವೀರನಲ್ಲದೆ ಬೇರೆಯಾಗಲು ಸಾಧ್ಯವೇ ಇಲ್ಲವೆಂದು.

ಆಮೇಲೆ, ಸ್ವಲ್ಪ ಹೊತ್ತಿನಲ್ಲಿ ಆಕೆ ತನ್ನ ಮಗನೆದುರಿನಲ್ಲಿ ನಿಂತಿದ್ದಳು. ಹುಟ್ಟುವುದಕ್ಕೆ ಒಂಬತ್ತು ತಿಂಗಳು ಮೊದಲು ಆಕೆ ಅವನನ್ನು ಅರಿತಿದ್ದಳು ; ತನ್ನ ಹೃದಯದಿಂದ ಈತ ಬೇರೆಯಾದವನೆಂದು ಒಂದು ಕ್ಷಣವೂ ತೋರಲಿಲ್ಲ ಆಕೆಗೆ. ಹೊಳೆದಿಳಿಯುವ ಬಣ್ಣಬಣ್ಣದ ರೇಸಿಮೆಯ ಉಡಿಗೆಗಳನ್ನು ತೊಟ್ಟು ನಿಂತಿದ್ದ ತನ್ನ ಮಗ ; ಅಮೂಲ್ಯವಾದ ಮುತ್ತುರತ್ನಗಳಿಂದ ಆತನ ಆಯುಧಗಳು ಎದುರಿನಲ್ಲಿ ಕೋರೈಸುತ್ತಿದ್ದವು. ಎಲ್ಲವೂ ಹೇಗಿರಬೇಕೋ ಹಾಗೆ ಇದ್ದವು. ಶ್ರೀಮಂತನಾಗಿ, ಕೀರ್ತಿಶಾಲಿಯಾಗಿ, ಹಾಡಿ ಹೊಗಳಿಸಿಕೊಳ್ಳುತ್ತ ಹೀಗೆ ನಿಂತ ಈತನನ್ನು ಆಕೆ ಹಿಂದೆ ಅನೇಕ ಸಲ ಕಂಡಿದ್ದಳು, ತನ್ನ ಕನಸುಗಳಲ್ಲಿ.

"ಅಮ್ಮಾ !"—ಮಮತೆಯಿಂದ ಆಕೆಯ ಕೈಗಳನ್ನು ಮುದ್ದಿಡುತ್ತ ಆತ ಉದ್ಗರಿಸಿದ. "ಅಂತೂ ನೀನು ನನ್ನ ಹತ್ತಿರ ಬಂದಿದ್ದೀಯೆ. ನಾಳೆಯೋ ನಾನು ನಗರವನ್ನು ನನ್ನ ಕೈವಶ ಮಾಡಿಕೊಳ್ಳುತ್ತೇನೆ !"—ಆತ ಆನಂದದಿಂದ ಹೇಳಿದ.

"ನೀನು ಹುಟ್ಟಿ ಬೆಳೆದ ತೊಟ್ಟಿಲು ಮಗೂ, ಆ ನಗರ"—ಆಕೆ ಎಚ್ಚರಿಸಿದಳು.

ಶೌರ್ಯದ ಮದದಿಂದ ಪ್ರಮತ್ತನಾಗಿ, ಇನ್ನೂ ಬೇಕೆಂಬ ಕೀರ್ತಿತೃಷ್ಣೆಯಿಂದ ಅಸ್ಪಷ್ಟನಾಗಿದ್ದ ಆತ, ಯೌವನ ಸಹಜವಾದ ಸೊಕ್ಕಿನ ಬಿಸಿಯಿಂದಲೇ ಹೇಳಿದ :

"ನಾನು ಈ ಜಗತ್ತಿನಲ್ಲಿ, ಈ ಜಗತ್ತಿಗಾಗಿಯೇ ಹುಟ್ಟಿದ್ದೇನೆ. ಆದ್ದರಿಂದ ಈ ಜಗತ್ತು ನನ್ನನ್ನು ಕಂಡು ವಿಸ್ಮಯದಿಂದ ತತ್ತರಿಸಿ ಹೋಗುವ ಹಾಗೆ ಮಾಡಬೇಕೆಂಬುದೇ ನನ್ನ ಹಂಬಲ ! ಈ ನಗರವನ್ನು ನಾನು ಇಷ್ಟು ದಿನವಾದರೂ ನೆಲಸಮ ಮಾಡದೆ ಬಿಟ್ಟಿರುವುದು ನಿನಗಾಗಿ ; ನೀನು ಅಲ್ಲಿಯೇ ಇದ್ದುದು ನನ್ನ ಮಾಂಸದಲ್ಲಿ ಮುಳ್ಳು ಸೇರಿಕೊಂಡಂತಾಗಿತ್ತು. ಒಮ್ಮೆಲೇ ಗುಡಿಗಟ್ಟಿ ಬರುತ್ತಿದ್ದ ಯಶಸ್ಸು ಅದರಿಂದಾಗಿ ತಡೆಯಿತು........ಇನ್ನು ನನಗೆ ಭಯವಿಲ್ಲ. ನಾಳೆಯೇ ಆ ಮುಚ್ಚರ ನಗರವನ್ನು ದೂಳೀಪಟ ಮಾಡಿಬಿಡುತ್ತೇನೆ !"

"ಆ ನಗರದ ಒಂದೊಂದು ಕಲ್ಲೂ ನಿನ್ನನ್ನು ಮಗುವಾದಾಗಿನಿಂದ ಬಲ್ಲುದು ; ಮಗುವೆಂದೇ ಇಂದಿಗೂ ಸ್ಮರಿಸಿಕೊಳ್ಳುತ್ತದೆ", ಆಕೆ ಹೇಳಿದಳು.

"ಕಲ್ಲುಗಳು ! ಹ್ಞು, ಮನುಷ್ಯ ಮಾತಾಡುವಂತೆ ಮಾಡುವವರೆಗೂ ಅವು ಮೂಕ ವಾಗಿಯೇ ಇರುತ್ತವೆ. ಕಲ್ಲುಗಳೇ ಏಕೆ, ಬೆಟ್ಟಗುಡ್ಡಗಳೆಲ್ಲ ನನ್ನನ್ನು ಕುರಿತು ಮಾತಾಡು ತ್ತಿರಬೇಕು—ಹಾಗೆ ಮಾಡುವುದೇ ನನ್ನ ಹಂಬಲ !"

"ಆದರೆ ಮನುಷ್ಯರು ?"—ಆಕೆ ಪ್ರಶ್ನಿಸಿದಳು.

"ನಿಜ ಮನುಷ್ಯರು—ನಾನು ಅವರನ್ನು ಮರೆತೇಬಿಟ್ಟಿದ್ದೆ.

"ಹೌದು ತಾಯಿ, ನನಗೆ ಅವರೂ ಬೇಕು. ಕಾರಣ, ವೀರರು ಮನುಷ್ಯರ ಸ್ಮೃತಿ ಯಲ್ಲಿ ಮಾತ್ರವೇ ಅಮರರಾಗುವುದು !"

ಆಕೆ ಹೇಳಿದಳು :

"ಯಾವನು ಮೃತ್ಯುವನ್ನು ಶಕ್ತಿಹೀನವನ್ನಾಗಿ ಮಾಡಿ ಬಾಳನ್ನು ಸೃಷ್ಟಿಸು ತ್ತಾನೋ, ಯಾವನು ಮರಣವನ್ನು ಜಯಿಸುತ್ತಾನೋ ಆತನೇ ನಿಜವಾದ ವೀರ."

"ಸುಳ್ಳು !" ಆತ ವಿರೋಧಿಸಿ ಹೇಳಿದ, "ದೇಶವನ್ನು ಸೃಷ್ಟಿಸುವವನಷ್ಟೇ, ಅದನ್ನು ಧ್ವಂಸ ಮಾಡುವವನೂ ಕೂಡ ಕೀರ್ತಿಶಾಲಿಯಾಗುತ್ತಾನೆ. ನೋಡು ತಾಯಿ, ರೋಂ ನಗರವನ್ನು ಯಾರು ಕಟ್ಟಿದರೆಂಬುದು ಯಾರಿಗೂ ಸರಿಯಾಗಿ ತಿಳಿದಿಲ್ಲ ; ಆದರೆ ಅಲಾರಿಕ್‌ನ ಹೆಸರು ನಮ್ಮೆಲ್ಲರಿಗೂ ಸುಪರಿಚಿತವಾಗಿದೆ. ಹಾಗೆಯೇ ಉಳಿದ ದೇಶ ವಿಧ್ವಂಸಕರೂ........"

"ಎಲ್ಲ ಹೆಸರುಗಳನ್ನೂ ಮಣ್ಣುಗೂಡಿಸಿ ಮೆರೆಯುವ ಹೆಸರುಗಳು ಅವು"—ಆಕೆ ವ್ಯಂಗ್ಯವಾಗಿ ಹೇಳಿದಳು.

ಸೂರ್ಯ ಅಸ್ತಮಿಸುವವರೆಗೂ, ಸಂಜೆ ಇಳಿಯುವವರೆಗೂ ಅವರು ಹೀಗೆಯೇ ವಾದಿಸಿಕೊಂಡರು. ಆತನ ಮಾತಿನ ಉಬ್ಬರ ಏರಿದಂತೆಲ್ಲ ಆಕೆ ಮಾತನಾಡುವುದು ಕಡಿಮೆ ಯಾಗುತ್ತ ಬಂದಿತು ; ಹೆಮ್ಮೆಯಿಂದ ಮೇಲಕ್ಕೆ ಎತ್ತಿದ್ದ ತಲೆ ಮೆಲ್ಲಮೆಲ್ಲನೆ ಅವನತ ವಾಗುತ್ತಿತ್ತು.

ತಾಯಿಯೇ ಸೃಷ್ಟಿಶಕ್ತಿ, ಸ್ಥಿತಿಶಕ್ತಿ. ವಿಧ್ವಂಸವನ್ನು ಕುರಿತು ಆಡುವ ಮಾತೆಲ್ಲವೂ ಆಕೆಗೆ ವಿರುದ್ಧವಾಗಿ ಆಡಿದ ಮಾತುಗಳೇ ಆಗುತ್ತವೆ. ಆದರೆ ಆತನಿಗೆ ಅದರ ಅರಿವಿರ ಲಿಲ್ಲ. ಆತ ತಿಳಿಯಲಿಲ್ಲ. ತನ್ನ ಬುದ್ಧಿ ತನ್ನ ಅಸ್ತಿತ್ವಕ್ಕೆ ವಿರುದ್ಧವಾಗಿ ವಾದಿಸುತ್ತಿದೆ ಯೆಂದು.

ತಾಯಿ ಯಾವಾಗಲೂ ಮೃತ್ಯುವಿಗೆ ವಿರುದ್ಧಳಾಗಿಯೇ ಇರುತ್ತಾಳೆ. ಮಾನವ ಮಂದಿರಕ್ಕೆ—ಈ ಮಮತೆಯ ಗುಡಿಗೆ—ಮೃತ್ಯುವನ್ನು ಕೊಂಡು ಬರುವ ಕಾಳಹಸ್ತ ವನ್ನು ಆಕೆ ದ್ವೇಷಿಸುತ್ತಾಳೆ. ಆದರೆ ಮಗನಿಗೆ ಮಾತ್ರ ಇದು ಅರ್ಥವಾಗಿರಲಿಲ್ಲ. ಎದೆ ಯನ್ನು ಮರುಭೂಮಿಯನ್ನಾಗಿ ಮಾಡುವ ಕೀರ್ತಿ ಕಾಮದ ಕೋಡುಮಿಂಚಿನಲ್ಲಿ ಆತ ಕುರುಡಾಗಿ ಹೋಗಿದ್ದ.

ಅಲ್ಲದೆ, ಆತನಿಗೆ ತಿಳಿದಿರಲಿಲ್ಲ—ತಾಯಿ ಒಂದೊಂದು ಸಲ ಎಷ್ಟು ಕ್ರೂರಿಯೂ

ಕುಶಲೆಯೂ ಆಗಿರುತ್ತಾಳೆ ಎನ್ನುವುದು; ತಾನು ಪಡೆದು ಪಾಲಿಸುವ ಜೀವಕೋಟಿಗೆ ಮೃತ್ಯು ಎದುರಾದ ಹೊತ್ತಿನಲ್ಲಿ ಎಂಥ ನಿರ್ಭೀತ ಯೋಧಳಾಗುತ್ತಾಳೆ ಎನ್ನುವುದು.

ಆಕೆ ತಲೆ ತಗ್ಗಿಸಿ ಕೂತಿದ್ದಳು. ಎಣೆಯಿಲ್ಲದಷ್ಟು ಸಂಪತ್ತನ್ನು ಸುರಿದು ತನ್ನ ಮಗ ಕಟ್ಟಿಸಿದ ಬಿಡಾರದ ಕಿಟಕಿಯಿಂದ ದೂರದ ನಗರ ಕಾಣಿಸುತ್ತಿತ್ತು. ಅಲ್ಲಿಯೇ ತಾನು ಮೊದಲ ಸಲಕ್ಕೆ ಬದುಕಿನ ಹಿತವಾದ ಮೃದು ಕಂಪನವನ್ನು ಕಂಡು ಅನುಭವಿಸಿದ್ದಳು; ಅಲ್ಲಿಯೇ ಈ ಮಗುವನ್ನು—ದೊಡ್ಡವನಾಗಿ ತನ್ನ ನಗರವನ್ನೇ ನಾಶ ಮಾಡಲು ಹಂಬಲಿಸುತ್ತಿರುವ ಈ ಮಗುವನ್ನು—ಪಡೆಯುವ ಸಲುವಾಗಿ ಕಾತರದ ಮೇಯ್ ಬೇನೆಯಿಂದ ಬಳಲಿದ್ದಳು.

ಅಸ್ತಮಿಸುತ್ತಿರುವ ಸೂರ್ಯನ ಕೆಂಪು ಕಿರಣಗಳು ನಗರದ ಗೋಡೆ ಗೋಪುರಗಳನ್ನು ರಕ್ತರಂಜಿತವಾಗಿಸಿದ್ದವು. ಮನೆ ಮನೆಗಳ ಕಿಟಕಿಯ ಬಾಗಿಲುಗಳಲ್ಲಿ ಕೆಂಪು ಬಣ್ಣದ ದುಃಖದೃಷ್ಟಿ ಬೀರಿ ಉರಿದಿತ್ತು. ಒಟ್ಟು ನಗರವೇ ಗಾಯಗಳ ಮುದ್ದೆಯಾಗಿ, ಒಂದೊಂದು ಗಾಯದಿಂದಲೂ ಜೀವದ ರಕ್ತಧಾರೆ ಅಜಸ್ರವಾಗಿ ಚಿಮ್ಮುತ್ತಿದ್ದ ಹಾಗೆ ಕಾಣುತ್ತಿತ್ತು. ಬರುಬರುತ್ತ ನಗರವೆಲ್ಲ ಕತ್ತಲೆಯಲ್ಲಿ ಮುಳುಗಿ ಶ್ಮಶಾನಸವದಂತಾಯಿತು. ಮೇಲೆ ಆಕಾಶದಲ್ಲಿ ನಕ್ಷತ್ರಗಳು ಹೊಳಗುತ್ತಿದ್ದವು, ಗೋರಿಯ ಮೇಲಿನ ಮೊಂಬತ್ತಿಗಳ ಹಾಗೆ.

ಶತ್ರುಗಳ ಗಮನವನ್ನು ಸೆಳೆಯಬಾರದೆಂದು, ಭೀತರಾಗಿ ಮನೆಯಲ್ಲಿ ದೀಪವನ್ನೂ ಉರಿಸದಿದ್ದ ಆ ಕತ್ತಲೆಯ ಮನೆಗಳು, ಆಕೆಗೆ ಅಲ್ಲಿಂದಲೇ ಕಾಣಿಸುತ್ತಿದ್ದವು. ಕತ್ತಲೆಯಲ್ಲಿ ಮುಚ್ಚಿ, ಹೆಣ ತುಂಬಿ ಇಡಿಕಿರಿದ ಆ ಬೀದಿಗಳು ಕೂಡ ಆಕೆಗೆ ಸ್ಪಷ್ಟವಾಗಿ ಕಾಣಿಸುತ್ತಿದ್ದವು. ಸಾವನ್ನೇ ಎದುರುನೋಡುತ್ತಿದ್ದ ಅಲ್ಲಿನ ಜನಗಳ ಮುಚ್ಚು ಬಾಯಿಯ ಪಿಸುಮಾತು ಕೂಡ ಆಕೆಗೆ ಸ್ಪಷ್ಟವಾಗಿ ಕೇಳಿಸುತ್ತಿತ್ತು. ಆಕೆ ಎಲ್ಲವನ್ನೂ ನೋಡುತ್ತಿದ್ದಳು, ಎಲ್ಲವನ್ನೂ ಕೇಳುತ್ತಿದ್ದಳು. ತನಗೆ ಅಷ್ಟು ಹತ್ತಿರವಾಗಿ, ಪ್ರಿಯವಾಗಿ ಎಡೆಗೆ ತಾಗಿ ನಿಂತಿತ್ತು ಆ ನಗರ. ತನ್ನ ಅಂತಿಮ ನಿರ್ಧಾರಕ್ಕಾಗಿ ಮೂಕವಾಗಿ ಕಾಯುತ್ತ ನಿಂತಿತ್ತು. ತನ್ನ ನಗರದ ಎಲ್ಲಾ ಜನರ ತಾಯಿ ತಾನು ಎಂದು ಭಾಸವಾಗುತ್ತಿತ್ತು ಆಕೆಗೆ.

ಕರಿದಾದ ಬೆಟ್ಟದ ಶಿಖರಗಳಿಂದ, ರೆಕ್ಕೆಬಂದ ಕುದುರೆಗಳಂತೆ ಮೋಡಗಳು ಕಣಿವೆಗಿಳಿದು ಆ ಮೃತನಗರದ ಮೇಲೆ ಎರಗುತ್ತಿದ್ದವು.

ಆಕೆಯ ಮಗ ಹೇಳುತ್ತಿದ್ದ :

"ಬಹುಶಃ ಈ ರಾತ್ರಿಯೇ ನಾವು ಮುತ್ತಿಗೆ ಹಾಕಬಹುದು. ರಾತ್ರಿ ಮಾತ್ರ ಕಪ್ಪುಗಟ್ಟಿಕೊಂಡಿದ್ದರೆ ಒಳ್ಳೆಯದಾಗುತ್ತಿತ್ತು! ಕಣ್ಣೆದುರು ಸೂರ್ಯ ಉರಿಯುತ್ತಿರುವಾಗ ಆಯುಧಗಳ ಜಳ ಕಣ್ಣನ್ನು ಕುರುಡುಮಾಡುತ್ತಿರುವಾಗ ಕೊಲ್ಲುವುದು ಕಷ್ಟ. ಎಷ್ಟೋ ಹೊಡೆತಗಳು ಗುರಿತಪ್ಪಿ ಹೋಗುತ್ತವೆ."

ಮಾತಾಡುತ್ತಿರುವ ಹಾಗೆ ಆತ ತನ್ನ ಹರಿತವಾದ ಕತ್ತಿಯನ್ನು ಪರೀಕ್ಷಿಸಿ ಕೊಳ್ಳುತ್ತಿದ್ದ.

ತಾಯಿ ಹೇಳಿದಳು :

"ಬಾ, ಮಗು. ನನ್ನ ತೊಡೆಯ ಮೇಲೆ ತಲೆಯಿಟ್ಟು ಮಲಗಿಕೋ. ಸ್ವಲ್ಪ ವಿಶ್ರಾಂತಿ ಪಡೆ......ನೀನು ಚಿಕ್ಕವನಾಗಿದ್ದಾಗ ಎಷ್ಟು ಹರ್ಷದಿಂದಿರುತ್ತಿದ್ದೆ, ಯೋಚಿಸಿ ನೋಡು. ಪ್ರತಿಯೊಬ್ಬರೂ ನಿನ್ನನ್ನು ಎಷ್ಟು ಪ್ರೀತಿಸುತ್ತಿದ್ದರು......"

ತಾಯಿ ಹೇಳಿದಂತೆ ಆತ ತನ್ನ ತಲೆಯನ್ನು ಆಕೆಯ ತೊಡೆಯ ಮೇಲಿಟ್ಟು ಕಣ್ಣುಮುಚ್ಚಿಕೊಂಡು ಹೇಳಿದ :

"ನಾನು ಈ ಜಗತ್ತಿನಲ್ಲಿ ನಿಜವಾಗಿ ಪ್ರೀತಿಸುವ ವಸ್ತುಗಳು ಎರಡು—ಒಂದು ಕೀರ್ತಿ, ಅದನ್ನು ಬಿಟ್ಟರೆ ನೀನು. ಏಕೆಂದರೆ ನಾನು ಇಷ್ಟು ಕೀರ್ತಿ ಪಡೆಯಲು ಕಾರಣ ಳಾದವಳೇ ನೀನು".

"ಹೆಣ್ಣುಗಳು ?"—ಆಕೆ ಮಗನ ಮುಖದ ಮೇಲೆ ಬಾಗಿ ಮೃದುವಾಗಿ ಕೇಳಿ ದಳು.

"ಓ ! ಹೆಣ್ಣುಗಳು ಎಷ್ಟು ಜನವಿಲ್ಲ ?—ಸಂಖ್ಯೆಯಿಲ್ಲದಷ್ಟು ! ತೀರಾ ಹಿತವಾದ ವಸ್ತುಗಳೆಲ್ಲವೂ ಒಂದಲ್ಲ ಒಂದು ಕಾಲಕ್ಕೆ ಬೇಸರ ತರುತ್ತವೆ. ಹೆಣ್ಣುಗಳ ಕತೆಯೂ ಅಷ್ಟೆ!"

"ನಿನಗೆ ಮಕ್ಕಳೂ ಬೇಡವೇನು ?"—ಅದು ತಾಯಿಯ ಕೊನೆಯ ಪ್ರಶ್ನೆ.

"ಏತಕ್ಕಾಗಿ ? ಯಾರ ಕೈಯಿಂದಾದರೂ ಸಾಯಲಿಕ್ಕೇನು ? ನನ್ನಂಥವರೇ ಯಾರಾದರೊಬ್ಬರು ಅವುಗಳನ್ನು ಕೊಂದು ಹಾಕಿದರೆ ?........ಆದರಿಂದ ನನಗೆ ತೀರ ಸಂಕಟವಾದೀತು. ಅಲ್ಲದೆ ಆ ಹೊತ್ತಿಗೆ ನಾನು, ಸೇಡು ತೀರಿಸಿಕೊಳ್ಳಲು ಕೂಡ ಆಗ ದಷ್ಟು ಅಶಕ್ತನಾಗಿಬಿಟ್ಟಿದ್ದರೆ ?........"

"ನೀನು ಸುಂದರವಾಗಿದ್ದೀಯೆ, ನಿಜ. ಆದರೆ ನಿನ್ನ ಹೃದಯ ಮಿಂಚಿನ ಕತ್ತಿಯ ಹಾಗೆ ಕ್ರೂರವಾಗಿದೆ"—ಆಕೆ ನಿಟ್ಟುಸಿರುಬಿಡುತ್ತ ಹೇಳಿದಳು.

"ನಿಜ, ಮಿಂಚಿನಂತೆ......"—ಆತ ಮಂದಹಾಸದಿಂದ ಉತ್ತರಿಸಿದ.

......ಮತ್ತೆ ಸ್ವಲ್ಪ ಹೊತ್ತಿನಲ್ಲಿ, ಆತ ಮಗುವಿನ ಹಾಗೆ ತನ್ನ ತಾಯಿಯ ತೊಡೆಯ ಮೇಲೆ ತಲೆಯಿಟ್ಟು ನಿದ್ರಿಸುತ್ತಿದ್ದ.

ತನ್ನ ಮಗನ ಹೃದಯ ಎಲ್ಲಿ ಸ್ಪಂದಿಸುತ್ತಿದೆ ಎನ್ನುವುದನ್ನು ಅವಳಿಗಿಂತಲೂ ಚೆನ್ನಾಗಿ ಅರಿತವರಾರು ?—ಆಕೆ ತನ್ನ ಕರಿಯ ಸೆರಗನ್ನು ಮಗನ ಮೇಲೆ ಹೊದಿಸಿ, ತನ್ನ ಬಳಿಯಲ್ಲಿದ್ದ ಚಾಕುವೊಂದನ್ನು ಹೊರಗೆ ತೆಗೆದು ಆತನ ಎದೆಗೆ ಬಲವಾಗಿ ನಾಟಿಸಿ ದಳು. ಅತ್ತಿತ್ತ ಹೊರಳಿ ಮರುಕ್ಷಣದಲ್ಲಿ ಆತ ಕೊನೆಯುಸಿರನ್ನೆಳೆದ. ಅಲ್ಲಿಂದ ಆಕೆ

ತನ್ನ ಮಗನ ಶವವನ್ನು ಎತ್ತಿ ಕೆಳಗೆಸೆದಳು. ಹೊರಗೆ ಬಂದು ನಿಂತು ತನ್ನ ನಗರದ ಕಡೆ ನೋಡಿ ಹೇಳಿದಳು :

"ನಗರದ ಒಬ್ಬ ಪ್ರಜಳಾಗಿ ನನ್ನ ನಾಡಿನ ಕ್ಷೇಮಕ್ಕೆ ನನ್ನ ಕೈಲಾದದ್ದನ್ನು ಮಾಡಿ ಮುಗಿಸಿದ್ದೇನೆ. ಇನ್ನು ತಾಯಿಯಾಗಿ ನನ್ನ ಮಗನ ಜೊತೆಗೇ ಹೋಗಲು ಬಯಸು ತ್ತೇನೆ! ನನ್ನ ದೇಶಕ್ಕೆ ಉತ್ತಮನಾದ ಮತ್ತೊಬ್ಬ ಮಗನನ್ನು ಕೊಡುವ ಶಕ್ತಿ ನನಗಿಲ್ಲ. ನನ್ನ ಬಾಳು ಇನ್ನು ಯಾರಿಗೂ ಉಪಯೋಗವಾಗಲಾರದು."

ತನ್ನ ಮಗನ ರಕ್ತದಿಂದ—ತನ್ನ ರಕ್ತದಿಂದ—ಇನ್ನೂ ಬಿಸಿಯಾಗಿದ್ದ ಆ ಬಾಕು ವನ್ನು, ಆಕೆ ದೃಢವಾದ ಕೈಗಳಿಂದ ತನ್ನ ಎದೆಗೆ, ಗುರಿತಪ್ಪದೆ ಸರಿಯಾಗಿ, ಬಲವಾಗಿ ನಾಟಿಸಿಕೊಂಡಳು. ನೊಂದ ಎದೆಯನ್ನು ಹುಡುಕಿಕೊಳ್ಳಲು ಎಷ್ಟು ಹೊತ್ತು ಬೇಕು ?



## ಗೋರ್ಕಿಯ ಕಥೆಗಳು

'ಮನುಷ್ಯನ ದೀರ್ಘಯಾತ್ರೆ ನಡೆದಿದೆ......ಹಳೆಯ ಮೂಢ ನಂಬಿಕೆಗಳು ಕಾಲಲ್ಲಿ ಸಿಕ್ಕಿ ಹುಡಿಯಾಗುತ್ತವೆ, ತಪ್ಪು-ತಾಗುಗಳು ಆಗಾಗ ದೂಳೆಬ್ಬಿಸಿ ಕಂಗೆಡಿಸುತ್ತದೆ: ಭೂತದ ಮೋಡ ಹಿಂದಿಂದ ಕವಿದುಕೊಂಡಿದೆ, ಭವಿಷ್ಯದ ಆಶ್ಚರ್ಯರಾಶಿಗಳು ಎದುರಲ್ಲಿ ಬೆರಗುಗೊಳಿಸುತ್ತವೆ....ಸ್ವತಂತ್ರವಾಗಿ ಗಂಭೀರವಾಗಿ ಹೆಮ್ಮೆಯಿಂದ ತಲೆಯೆತ್ತಿ ಸಾವಕಾಶವಾಗಿ ನಡೆದಿದ್ದಾನೆ ಮನುಷ್ಯ –ಏಕಾಂಗಿಯಾಗಿ........ಹೆಜ್ಜೆಗಳು ದೃಢವಾಗಿವೆ......ಯಾತ್ರೆ ಸಾಗುತ್ತಿದೆ ಮುಂದೆಮುಂದಕ್ಕೆ ಮೇಲುಮೇಲಕ್ಕೆ...........'

ರಷ್ಯಾದ ಪ್ರಖ್ಯಾತ ಲೇಖಕ ಮ್ಯಾಕ್ಸಿಂ ಗೋರ್ಕಿಯ ಈ ಕಣಸೇ ಇಲ್ಲಿರುವ ಆತನ ಕೆಚ್ಚಿನ ಕಥೆಗಳಲ್ಲಿ ಚಂದ ಮೈದಾಳಿಗೊಂಡಿದೆ.

ಅಕ್ಷರ ಪ್ರಕಾಶನ ಸಾಗರ ಕರ್ನಾಟಕ ರಾಜ್ಯ